ವ್ಯಕ್ತಿ - ವ್ಯಕ್ತಿತ್ವ - ಸಮೃದ್ಧಿ

# ವಿಚಾರ

## ತ್ರಿ - ವಿ - ಕ್ರಮ

## ಭಾಗ - ೧

ಸಂತೋಷಕುಮಾರ ಗುಲ್ವಾಡಿ



ಶ್ರೀ ಧರ್ಮಸ್ಥಳ ಮಂಜುನಾಥೇಶ್ವರ ಪಬ್ಲಿಕೇಶನ್ ಟ್ರಸ್ಟ್ (ರಿ)

ಉಜಿರೆ - ೫೭೪ ೨೪೦

# ಮುನ್ನುಡಿ

ಶ್ರೀ ಸಂತೋಷಕುಮಾರ್ ಗುಲ್ವಾಡಿಯವರು ಕಳೆದ ಮೂರು ದಶಕಗಳಲ್ಲಿ ತಮ್ಮ ವೈಚಾರಿಕ ಬರವಣಿಗೆಯ ಮೂಲಕ ಕನ್ನಡಿಗರಿಗೆ ಚಿರಪರಿಚಿತರು. ತಮ್ಮ ವೈಚಾರಿಕತೆಯನ್ನು ಧಾರ್ಮಿಕ ಹಿನ್ನೆಲೆಯಲ್ಲಿ ಬೆಳೆಸಿಕೊಂಡು, ಕಾಲಕ್ಕನುಗುಣವಾಗಿ ಸಮಾಜಕ್ಕೆ ಉಪಯುಕ್ತವಾದ ಚಿಂತನ -ಮಂಥನಗಳನ್ನು ನಡೆಸಿ ಸೌಮ್ಯವಾದ, ಆದರೆ ಅಷ್ಟೇ ದೃಢವಾದ ಶೈಲಿಯಲ್ಲಿ ತಮ್ಮ ಲೇಖನಗಳನ್ನು ಬರೆದಿರುತ್ತಾರೆ.

ಅವರು ಬರೆದ ಲೇಖನಗಳ ಸಂಗ್ರಹ "ತ್ರಿವಿಕ್ರಮ" (ವಿಚಾರ-ವಿವೇಕ-ವಿಕಾಸ)ವನ್ನು ನಮ್ಮ ಶ್ರೀ ಮಂಜುನಾಥೇಶ್ವರ ಪುಸ್ತಕ ಪ್ರಕಾಶನ ಮಾಲೆಯ ವತಿಯಿಂದ ಪ್ರಕಟಿಸಲು ಅವಕಾಶ ದೊರೆತಿರುವುದಕ್ಕೆ ನಮಗೆ ಸಂತೋಷವಾಗಿದೆ.

ಪ್ರತಿಯೊಬ್ಬ ವ್ಯಕ್ತಿ ನಿತ್ಯವೂ ದೈಹಿಕ ಬೆಳವಣಿಗೆಯ ಜೊತೆಗೆ ಬೌದ್ಧಿಕ ಬೆಳವಣಿಗೆಯನ್ನು ಸಾಧಿಸುತ್ತಾನೆ. ದೈಹಿಕ ಬೆಳವಣಿಗೆ ಸಹಜವಾಗಿ ಆಗುತ್ತಿದ್ದರೆ, ಪ್ರತಿ ವ್ಯಕ್ತಿಯ ಬೌದ್ಧಿಕ ಬೆಳವಣಿಗೆಗೆ ದೊರಕುವ ಅವಕಾಶ, ಪರಿಸರ ಮತ್ತು ಅಧ್ಯಯನದಿಂದ ಪ್ರಗತಿಯಾಗುತ್ತಿರುತ್ತದೆ. ಇದಕ್ಕೆ ಜೀವನೋತ್ಸಾಹವೂ, ಆಸಕ್ತಿಯೂ, ಅದೃಷ್ಟವೂ ಇರಬೇಕು. ಅದೃಷ್ಟ ಎಂದರೆ ಉತ್ತಮ ಗುರು ಅಥವಾ ಉತ್ತಮ ಗ್ರಂಥಗಳು. ಉತ್ತಮ ಸ್ನೇಹಿತರು, ಉತ್ತಮ ಸಾಂಸಾರಿಕ ಪರಿಸರ ಮತ್ತು ಉತ್ತಮ ಪರಿಸರ ಎಂದು ಗುರುತಿಸಬೇಕಾಗುತ್ತದೆ.

ಈ ದಿಸೆಯಲ್ಲಿ ಭಗವದ್ಭಕ್ತಿ ಮನಸ್ಸಿನ ಮೇಲೆ ದೈವತ್ವದ ಬಲೆಯನ್ನು ಬೀಸುತ್ತದೆ. ಗುರುವಾಣಿ ಶಿಕ್ಷಣವನ್ನು ಕೊಡುತ್ತದೆ. ಜೊತೆಗೆ ಸಂಸ್ಕಾರವನ್ನು ನೀಡುವ ಮಾರ್ಗದರ್ಶಿಯಾಗುತ್ತದೆ. ಸಾಹಿತಿಗಳು, ಚಿಂತಕರು, ಅನುಭಾವಿಗಳು ಮುಂತಾದವರು

ಸಮಾಜದ ಗತಿಯನ್ನು, ಆಗು ಹೋಗುಗಳನ್ನು ಗಮನಿಸಿ ಜಾಗೃತಿಯನ್ನುಂಟು ಮಾಡುವ ಪ್ರಯತ್ನವನ್ನು ಮಾಡುತ್ತಾರೆ. ಈ ಕಾರ್ಯಕ್ಕೆ ತೊಡಗಿದ ಶ್ರೀ ಸಂತೋಷಕುಮಾರ್ ಗುಲ್ವಾಡಿಯವರು ತರಂಗ ಪತ್ರಿಕೆಯಲ್ಲಿ "ಹಂಸ"ಎಂಬ ಹೆಸರಿನಲ್ಲಿ ಬರೆದ ಲೇಖನಗಳನ್ನು ನಿಮ್ಮ ಮುಂದಿಡಲಾಗಿದೆ.

ಈ ಲೇಖನಗಳಲ್ಲಿ ವಿಸ್ತಾರವಾದ ಚಿಂತನೆಗಳಿವೆ. ಇವುಗಳನ್ನು ಅಧ್ಯಯನ ಮಾಡಿದರೆ ಬದುಕಿನಲ್ಲಿ ಬರುವ ಅನೇಕ ಸಂದರ್ಭಗಳಲ್ಲಿ ಖಚಿತವಾದ ಬೆಂಬಲವನ್ನೂ, ಸೂಕ್ತ ಮಾರ್ಗದರ್ಶನವನ್ನೂ ನೀಡಬಹುದು. ಫಲಾಪೇಕ್ಷೆ ಇಲ್ಲದೆ, ಈ ಲೇಖನಗಳನ್ನು ಓದಿದರೂ, ಸೂಕ್ತ ಸಮಯದಲ್ಲಿ ಅವು ಬೆಂಬಲವನ್ನೂ, ಮಾರ್ಗದರ್ಶನವನ್ನೂ ನೀಡಬಲ್ಲವು. ಈ ಉದ್ದೇಶದಿಂದಲೇ ಈ ಕೃತಿಯನ್ನು ನಮ್ಮ ಪ್ರಕಾಶನ ಮಾಲೆಯಿಂದ ಪ್ರಕಟಿಸಲಾಗಿದೆ.

ಲೇಖನಗಳ ಸಂಗ್ರಹವನ್ನು ಒದಗಿಸಿಕೊಟ್ಟ ಶ್ರೀ ಸಂತೋಷಕುಮಾರ ಗುಲ್ವಾಡಿಯವರಿಗೂ ಅಭಿನಂದನೆಗಳು. ಈ ಕೃತಿಯನ್ನು ಓದುವ ವಾಚಕರಿಗೂ ಶ್ರೀ ಮಂಜುನಾಥ ಸ್ವಾಮಿ ಸಕಲ-ಸನ್ಮಂಗಲವನ್ನುಂಟು ಮಾಡಲೆಂದು ಪ್ರಾರ್ಥಿಸುತ್ತೇನೆ.

(ಡಿ. ವೀರೇಂದ್ರ ಹೆಗ್ಗಡೆಯವರು)

## ಅರ್ಪಣೆ

ಶ್ರೀ ಕ್ಷೇತ್ರ ಧರ್ಮಸ್ಥಳಕ್ಕೆ ಅನನ್ಯ ಶ್ರದ್ಧಾ-ಭಕ್ತಿಗಳಿಂದ ಬರುತ್ತಿರುವ ಲಕ್ಷಾಂತರ ಭಕ್ತರಿಗೆ -

ಹಾಗೂ

ಈ ಭಕ್ತರ ಸೇವೆಯನ್ನು ಅಷ್ಟೇ ಮಮತೆ, ನಿಷ್ಠೆ, ಆದರಗಳಿಂದ ಸತತವಾಗಿ ಮಾಡುತ್ತಿರುವ ಶ್ರೀ ಕ್ಷೇತ್ರದ ಸಿಬ್ಬಂದಿಗಳಿಗೆ -

ವಿಚಾರ • ವಿವೇಕ • ವಿಕಾಸ

ಈ ಮೂರು ಪುಸ್ತಕಗಳನ್ನು ಅರ್ಪಿಸಿದ್ದೇನೆ.

• ಲೇಖಕ

## ಸಂತೋಷಕುಮಾರ ಗುಲ್ವಾಡಿ

### ಪ್ರಕಟಿತ ಗ್ರಂಥಗಳು

* 1. ಅಂತರಂಗ-ಬಹಿರಂಗ (ಸಂಪಾದಕೀಯಗಳು ಭಾಗ-1) 1983 ರಿಂದ 1987
* 2. ಅಂತರಂಗ-ಬಹಿರಂಗ (...ಭಾಗ-2) 1988 ರಿಂದ 1992
3. ಅಂತರಂಗ-ಬಹಿರಂಗ (...ಭಾಗ-3) 1993
4. ಅಂತರಂಗ-ಬಹಿರಂಗ (...ಭಾಗ-4) 1994
5. ಅಂತರಂಗ-ಬಹಿರಂಗ (...ಭಾಗ-5) 1995
6. ಅಂತರಂಗ-ಬಹಿರಂಗ (...ಭಾಗ-6) 1996
7. ಅಂತರಂಗ-ಬಹಿರಂಗ (...ಭಾಗ-7) 1997
8. ಅಂತರಂಗ-ಬಹಿರಂಗ (...ಭಾಗ-8-9) 1998-99-2000(ಒಟ್ಟು 2,500 ಪುಟಗಳು)
9. ಮೊದಲ ಮೊಗ್ಗು (ಕಥಾಸಂಕಲನ)
10. ಶಿಲಾಬಾಲಿಕೆ (ಮಿನಿ ಕಾದಂಬರಿ)
11. ನಾನು ಹೃದಯ ಚಿಕಿತ್ಸೆ ಮಾಡಿಸಿಕೊಂಡೆ - ಸ್ವಾನುಭವ (ದ್ವಿತೀಯ ಮುದ್ರಣ)
12. ಓಂಕಾರನಾಥ್ ಠಾಕೂರ್ (ಮಕ್ಕಳಿಗಾಗಿ ಜೀವನಚಿತ್ರ)
13. ಪೃಥ್ವೀರಾಜ ಕಪೂರ್ (ಮಕ್ಕಳಿಗಾಗಿ ಜೀವನಚಿತ್ರ)
14. ಉಗ್ರಾಣ ಮಂಗೇಶ ರಾವ್ - ಜೀವನಚಿತ್ರ
15. ಚಿತ್ರಾಪುರ ರಥೋತ್ಸವ - ಸಂಶೋಧನೆ
16. ಕನ್ನಡದ ಪ್ರಪ್ರಥಮ ಕಾದಂಬರಿಕಾರ-ಗುಲ್ವಾಡಿ ವೆಂಕಟ್‌ರಾವ್ ಬದುಕು-ಬರಹ (ಸಂಪಾದಿತ)
17. ದ.ಕ. ಜಿಲ್ಲೆಯ ಮಕ್ಕಳ ಸಾಹಿತ್ಯದ ಮೊದಲಿಗರು (ಸಂಪಾದಿತ)
18. ಮಹಾತ್ಮಾ ಗಾಂಧೀ ಮಾರ್ಗ (ವೈಚಾರಿಕ ಲೇಖನಗಳು)
19. ಹಂಸಧ್ವನಿ (ಲೇಖನ ಸಂಚಯ)
20. ಕುಂಡ್ಯಾ ಕುರ್ಕುಳ (ಕೊಂಕಣಿ ಜಾನಪದ ಕತೆಗಳು)
** 21. ತಾತಾ ತಿಂಗಣ (ಕೊಂಕಣಿ ಜಾನಪದ ಹಾಡುಗಳ ಸಂಗ್ರಹ)
22. ಗಂಜೀಫಾ ಕಲೆ (ಕರ್ನಾಟಕ ಲಲಿತ ಕಲಾ ಅಕಾಡೆಮಿ ಪ್ರಕಟಣೆ)
23. ಅಭಿನವ (ಸಂಪಾದಕ)
24. ಸ್ಮೃತಿ (ಸಂಪಾದಕ)
25. ಭಕ್ತಿಭಾರತಿ (ಸಂಪಾದಕ)
26. ಮಹಾಪತ್ರಕರ್ತ ಮಹಾತ್ಮಾಗಾಂಧೀಜಿ
27-28-29 ತ್ರಿ-ವಿ-ಕ್ರಮ ವಿಚಾರ * ವಿವೇಕ * ವಿಕಾಸ (ಮೂರು ಸಂಪುಟಗಳು)
30. 'ಓಂ' ಪ್ರಣವ ಪರಂಪರೆ

---

* ಕರ್ನಾಟಕ ಸಾಹಿತ್ಯ ಅಕಾಡೆಮಿ ಪ್ರಶಸ್ತಿ
** ಕರ್ನಾಟಕ ಕೊಂಕಣಿ ಸಾಹಿತ್ಯ ಅಕಾಡೆಮಿ ಪ್ರಶಸ್ತಿ

# ತ್ರಿ - ವಿ - ಕ್ರಮ

## ವಿಚಾರ • ವಿವೇಕ • ವಿಕಾಸ



## ಬರಹಗಾರನ ಬಿನ್ನಹ

ಜೀವನಕ್ಕೆ ಕನ್ನಡಿ ಹಿಡಿದು ನಮ್ಮ ನಮ್ಮ ಆತ್ಮ ಸ್ವರೂಪಗಳ ಸ್ವ-ವಿಮರ್ಶೆಯನ್ನು ನಾವು ನಾವೇ ಮಾಡಿಕೊಳ್ಳುವ ಕೆಲಸ ತುಂಬ ಸ್ವಾರಸ್ಯಕರವಾದುದು. ವಾಮನನಾಗಿ ಹುಟ್ಟಿದ ಮಾನವನು ತನ್ನ ಬುದ್ಧಿಮತ್ತೆ, ಕೃತುಶಕ್ತಿಗಳಿಂದ ತ್ರಿವಿಕ್ರಮನಾಗಬಹುದು ಎಂಬ ಸಾಂಕೇತಿಕ ಹಿನ್ನೆಲೆಯಲ್ಲಿ ಈ ಬರಹಗಳು ಮೂಡಿವೆ. ಈ ತ್ರಿ-ವಿ-ಕ್ರಮಗಳೇ ವಿಚಾರ, ವಿವೇಕ, ವಿಕಾಸ. ಇವು ಬದುಕಿನ ವರ್ಣಮಯ ಝಲಕ್‌ಗಳು.

ಮೂಲತ: ವಿಷ್ಣುವಿನ 24 ಹೆಸರುಗಳಲ್ಲಿ ತ್ರಿವಿಕ್ರಮ ಒಂದು ರೂಪ. ದಶಾವತಾರಗಳಲ್ಲಿ ಒಂದು. ಅದರಲ್ಲೂ ಮನುಷ್ಯ ರೂಪದಲ್ಲಿ ಮೊದಲನೆಯದು. ಜ್ವಾಲಾಮುಖಿಗಳಿಂದ ಆವೃತವಾದ ಪೃಥ್ವಿಯನ್ನು ವಿಷ್ಣುವು ಮೂರು ಬಾರಿ ಆಕ್ರಮಣ ಮಾಡಿದ ಕತೆ ಡಾರ್ವಿನ್‌ಗಿಂತಲೂ ಸಾವಿರಾರು ವರ್ಷಗಳ ಹಿಂದಿನ ನಮ್ಮ ಋಗ್ವೇದದಲ್ಲೇ ಬಂದಿದೆ.

*ತ್ರಿರ್ದೇವ: ಪೃಥಿವೀಮೇಷ ಏತಾಂ ವಿ ಚಕ್ರಮೇ ಶತರ್ಚಸಂ ಮಹಿತ್ವಾ ।*
*ಪ್ರ ವಿಷ್ಣುರಸ್ತು ತವಸಸ್ತವೀಯಾನ್ ತ್ವೇಷಂ ಹ್ರಸ್ಯ ಸ್ಥವಿರಸ್ಯ ನಾಮ ॥*
*ವಿ ಚಕ್ರಮೇ ಪೃಥಿವೀಮೇಷ ಏತಾಂ ಕ್ಷೇತ್ರಾಯ ವಿಷ್ಣುರ್ಮನುಷೇ ದಶಸ್ಯನ್ ।*
*ಧ್ರೂವಾಸೋ ಅಸ್ಯ ಕೀರಯೋ ಜನಾಸ ಉರುಕ್ಷಿತಿಂ ಸುಜನಿಮಾ ಚಕಾರ ॥*

*(ಋಗ್ವೇದ 7-100-3-4)*

(ನೂರಾರು ಜ್ವಾಲಾಮುಖಿಗಳಿಂದ ತುಂಬಿದ ಭೂಮಿಯನ್ನು ದೇವರು ಮೂರು ಸಲ ಆಕ್ರಮಣ ಮಾಡಿದನು. ಹಾಗೆಂದೇ ಎಲ್ಲರ ಪೈಕಿ ವಿಷ್ಣುವೇ

ಪ್ರಭಾವಶಾಲಿ ಎನಿಸಿದನು. ಮನುಷ್ಯರಿಗೆ ಉಳಿಯಲು ಹಾಗೂ ಕೃಷಿ-ಕರ್ಮಗಳನ್ನು ಮಾಡಲು ಪೃಥ್ವಿಯು ಯೋಗ್ಯವೆಂದು ವಿಷ್ಣುವು ಇದನ್ನು ಮೂರು ಸಲ ಆಕ್ರಮಿಸಿದನು. ಇದರಿಂದ ಉದ್ಯಮಶೀಲರಾದ ಅವನ ಭಕ್ತರು ನಿಶ್ಚಿಂತರಾದರು. ಪವಿತ್ರ ಕೀರ್ತಿಯ ವಿಷ್ಣುವು ಅವರ ನಿವಾಸಸ್ಥಾನಗಳನ್ನು ಪ್ರಶಸ್ತಗೊಳಿಸಿದನು)

ಈ ಕತೆಯ ಅರ್ಥಪೂರ್ಣತ್ವವೇನು? ವೈಶಿಷ್ಟ್ಯವೇನು? ದೈವಕೃಪೆ ಹಾಗೂ ಯೋಗದಿಂದ ಭೂಮಿಯಲ್ಲಿರುವ ಜನತೆ ಉದ್ಯಮಶೀಲರಾಗಬೇಕು, ಸಾರ್ಥಕ ಮನೋವೃತ್ತಿಯನ್ನು ಬೆಳೆಸಿಕೊಳ್ಳಬೇಕೆಂಬುದೇ ಈ ಆಶಯ. ಇದರಿಂದ ಎಲ್ಲರೂ ಪರಸ್ಪರ ಪ್ರೀತಿ-ಸೌಹಾರ್ದ ಗೌರವಗಳಿಂದ ಸುಖ ಸಂತೋಷಗಳಿಂದ ಇರಬೇಕು ಎಂಬುದು ಆದರ್ಶ. ಅದನ್ನು ಸಾಂಕೇತಿಕವಾಗಿ ಬಳಸಿದ್ದೇನೆ.

ವ್ಯಕ್ತಿ-ವ್ಯಕ್ತಿತ್ವ-ವಿಕಾಸ-ಪರ್ಸನಾಲಿಟಿ ಡೆವಲೆಪ್‌ಮೆಂಟ್ ಎಂಬುದು ಇತ್ತೀಚೆಗೆ ವಿದೇಶದಿಂದ ಹೊಸತಾಗಿ ಆಮದಾದ ಸರಕು ಅಲ್ಲ. ಭಾರತದಲ್ಲಿ, ಮನೆಮನೆಗಳಲ್ಲಿ, ಅದಕ್ಕೂ ಹಿಂದೆ ಕಾಡುಗಳಲ್ಲಿದ್ದ ಋಷಿಮುನಿ ಆಶ್ರಮಗಳಲ್ಲಿ ನಮ್ಮದೇ 'ದೇಸೀ' ಪರಂಪರೆಯಲ್ಲಿ ಸಂಸ್ಕಾರ ಪಡೆಯುತ್ತಿದ್ದ ರೀತಿ ವಿಶಿಷ್ಟವಾದುದಾಗಿತ್ತು. ಅದು ಪಾಶ್ಚಾತ್ಯ ಸಂಸ್ಕೃತಿಗಳಿಗಿಂತ ಪೂರ್ವದ್ದು, ಆದರೆ ಅಷ್ಟೇ ಅತ್ಯಾಧುನಿಕವಾದುದು. ಎಲ್ಲ ಕಡೆಯ ಅಂಥ ಒಳ್ಳೆಯ ವಿಚಾರಗಳನ್ನೂ 'ಆನೋ ಭದ್ರಃ ಕ್ರತವೋ ಯಂತು ವಿಶ್ವತಃ' ಎಂಬ ವೇದವಾಣಿಯ ಸಂದೇಶದಂತೆ ಇಲ್ಲಿ ವ್ಯಾಖ್ಯಾನಿಸಿದ್ದೇನೆ. ಒಂದೊಂದನ್ನೂ ಮೆಲುಕಾಡುತ್ತ, ಶಾಂತಿಯಿಂದ ವಿಮರ್ಶಿಸುತ್ತ ಆಚರಣೆಗೆ ತರಬೇಕು ಎನ್ನುವ ಪ್ರಯತ್ನ, ಪ್ರೇರಣೆಗಳೂ ಇಲ್ಲಿವೆ.

ಈ ಅಂಕಣವನ್ನು 1996-98ರ ನಡುವೆ ಮೂರು ವರ್ಷಕಾಲ - ವಾರಕ್ಕೊಂದು ವಿಷಯ (ಐಡಿಯಾ) ದಂತೆ 'ಹಂಸ' ಎಂಬ ಗುಪ್ತನಾಮದಿಂದ ನಾನು ಸಂಪಾದಕನಾಗಿದ್ದಾಗ, 'ತರಂಗ' ಮತ್ತು 'ನೂತನ' ಪತ್ರಿಕೆಗಳಿಗೆ ಚಿಂತನೆಯ ರೂಪದಲ್ಲಿ ನನ್ನ ಖುಷಿಗಾಗಿಯೇ

ಒಟ್ಟು 150ಕ್ಕೂ ಹೆಚ್ಚು ಚುಟುಕು ಮಿಂಚನೋಟಗಳನ್ನು ಬರೆದೆ. ಇವು ಬಲು ಜನಪ್ರಿಯವಾಗಿ ಪುಸ್ತಕ ರೂಪದಲ್ಲಿ ತರಬೇಕೆಂಬ ಬೇಡಿಕೆ ತುಂಬ ಬಂದಿತು.

'ಲೋಕೋ ಭಿನ್ನ ರುಚಿ:' ಎಂಬುದಕ್ಕೆ ಅನುಗುಣವಾಗಿ, ಪತ್ರಿಕೋದ್ಯಮದ ವೈವಿಧ್ಯಪೂರ್ಣ ಹೂರಣಕ್ಕೆ ಪೂರಕವಾಗಿ, ಹಾಗೂ ನನ್ನ ಹಲವು ವಿಷಯಗಳ ಆಸಕ್ತಿಯಿಂದಾಗಿ ಈ ಗ್ರಂಥಗಳಲ್ಲಿ ಬೇರೆ ಬೇರೆ ಆಯಾಮಗಳನ್ನು ತರಲು ಪ್ರಯತ್ನಿಸಿದ್ದೇನೆ. ಓದುಗರಿಗೆ ಈ 'ಪಂಚಕಜ್ಜಾಯ' ಮೆಚ್ಚಿಕೆಯಾಗಬಹುದೆಂದುಕೊಂಡಿದ್ದೇನೆ. ಇಲ್ಲಿ ಕೆಲವು ವಿಷಯಗಳು ಪುನರಾವರ್ತನೆ ಆದಂತೆ ಕಂಡರೂ ಅವುಗಳ ವಿವರ ಬೇರೆ ಬೇರೆ. ಪರಿಣಾಮಕಾರಿಯಾಗುವಂತೆ ಈ ಪ್ರಯೋಗ.

ನನ್ನ ಜೀವನ ಯಾತ್ರೆಯಲ್ಲಿ ಭೇಟಿಯಾದಂಥ ಅನೇಕ ಸತ್ಪುರುಷರು, ಸಂತರು, ಭಕ್ತರು, ಸಜ್ಜನರು, ಅಪ್ಪಟ ಸಾರ್ವಜನಿಕ ಸೇವಕರು, ಶ್ರೀಸಾಮಾನ್ಯರು, ಮುಗ್ಧರು... ಇವರೆಲ್ಲರಲ್ಲಿ ದೈವಿಕ ಅಂಶದ ಸದ್ಗುಣಗಳನ್ನು ಕಂಡಾಗ ಅವು ನನ್ನ ಮನಸ್ಸಿನ ಮೇಲೆ ಗಾಢವಾಗಿ ಅಚ್ಚೊತ್ತಿದ್ದುವು. ''ಈ ಜಗತ್ತು ನಡೆಯುವುದೇ ಇಂಥ ಸಂತ-ಸಜ್ಜನರಿಂದ'' ಎಂದು ನನ್ನ ಮುತ್ತಜ್ಜಿ ಹೇಳುತ್ತಿದ್ದ ಮಾತು ಮನಸ್ಸಿನಲ್ಲಿ ಪ್ರತಿಧ್ವನಿಸುತ್ತಿದೆ, ಈಗಲೂ. ಅಂಥ ಭಾವನೆಗಳಿಗೆ, ವಿಷಯಗಳಿಗೆ ವೇದ, ಇತಿಹಾಸ, ಪುರಾಣ, ಕಾವ್ಯ, ಪ್ರಬಂಧಗಳ ಹಿನ್ನೆಲೆಯ ಚೌಕಟ್ಟನ್ನು ಆಯಾಮವಾಗಿ ಜೋಡಿಸಿದ್ದಷ್ಟೆ ನನ್ನ ಸೇವೆ.

ಒಂದೇ ಪುಸ್ತಕದ ಬದಲು ಮೂರು ಭಾಗಗಳಲ್ಲಿ ತರಬೇಕೆಂದು ಸೂಚಿಸಿ, ತಮ್ಮ ಪ್ರಕಾಶನದ ಆಶ್ರಯದಲ್ಲಿ ಪ್ರಕಟಿಸುವುದಾಗಿ ರಾಜರ್ಷಿ ಡಾ.ವೀರೇಂದ್ರ ಹೆಗ್ಗಡೆಯವರು ಆಶೀರ್ವದಿಸಿದರು. ಇದೆಲ್ಲವೂ ಅವರು ನನ್ನ ಮೇಲಿಟ್ಟ ಪ್ರೀತಿ-ವಾತ್ಸಲ್ಯಗಳ ದ್ಯೋತಕ. ಅವರಿಗೆ ನಮೋ ನಮ: 'ಅಂತರಂಗ-ಬಹಿರಂಗ' ದ ಮೊದಲಿನ ಎರಡು ಸಂಪುಟಗಳನ್ನು ರಾಜರ್ಷಿ ಡಾ। ವೀರೇಂದ್ರ ಹೆಗ್ಗಡೆಯವರೇ ಧಾರವಾಡದಲ್ಲಿ ಬಿಡುಗಡೆಗೊಳಿಸಿದ್ದರು. ಅನಂತರ ಅವಕ್ಕೆ ಕರ್ನಾಟಕ ರಾಜ್ಯ ಸಾಹಿತ್ಯ

ಅಕಾಡೆಮಿ ಪ್ರಶಸ್ತಿಯೂ ಬಂದಿತು. ರಾಜರ್ಷಿ ಡಾ.ವೀರೇಂದ್ರ ಹೆಗ್ಗಡೆಯವರ ಮಾತೃಶ್ರೀ ರತ್ನಮ್ಮನವರು ಹಾಗೂ ಶ್ರೀಮತಿ ಹೇಮಾವತಿ ಹೆಗ್ಗಡತಿ ಅವರೂ ಮೊದಲಿನಿಂದ ನನ್ನ ಬರವಣಿಗೆಯ ಬಗೆಗೆ ಆಸಕ್ತಿ ತೋರಿಸುತ್ತ ಬಂದವರು. ಅವರಿಗೆ ವಂದನೆಗಳು.

ಇದಕ್ಕೆ ಪೂರ್ಣ ಸಹಕಾರ ಹಾಗೂ ಬೆಂಬಲ ಕೊಟ್ಟವರು ಉಜಿರೆಯ ಶ್ರೀ ಧರ್ಮಸ್ಥಳ ಮಂಜುನಾಥೇಶ್ವರ ಪಬ್ಲಿಕೇಷನ್ಸ್ ಟ್ರಸ್ಟ್ (ರಿ) ಇದರ ಕಾರ್ಯದರ್ಶಿಗಳೂ ನನ್ನ ಹಿರಿಯ ಮಿತ್ರ-ಹಿತೈಷಿಗಳೂ ಆಗಿರುವ ನಿವೃತ್ತ ಪ್ರಿನ್ಸಿಪಾಲ್ ಪ್ರೊ|| ಎಸ್. ಪ್ರಭಾಕರ್ ಅವರು. ಅವರಿಗೆ ಕೃತಜ್ಞತಾಪೂರ್ವಕ ಪ್ರಣಾಮಗಳು.

ಸಕ್ರಿಯ ಪತ್ರಿಕೋದ್ಯಮದಿಂದ ಸ್ವಯಂ ನಿವೃತ್ತಿ ಹೊಂದಿದರೂ ಬರಹಗಾರನಿಗೆಲ್ಲಿ ನಿವೃತ್ತಿ? ಶ್ರೀ ಧರ್ಮಸ್ಥಳ ಮಂಜುನಾಥೇಶ್ವರ ಕ್ಷೇತ್ರದಿಂದ ಹೊರಡುತ್ತಿರುವ 'ಮಂಜುವಾಣಿ' ಗೆ ಈಗ 'ಮೌಲ್ಯಾರಾಧನೆ' ಎಂಬ ಅಂಕಣ ಬರೆಯುತ್ತಿರುವುದು ನನಗೆ ಸಂತೃಪ್ತಿ ನೀಡಿದೆ. 'ತ್ರಿ-ವಿ-ಕ್ರಮ' ದ ವ್ಯಕ್ತಿ ವ್ಯಕ್ತಿತ್ವ ವಿಕಾಸದ ಅರ್ಥಪೂರ್ಣ ಭಾವನೆಗಳನ್ನೇ ಇಟ್ಟುಕೊಂಡು, ಅದಕ್ಕೆ ಇನ್ನಷ್ಟು ಆಧ್ಯಾತ್ಮಿಕ ಅಮೃತಸ್ಪರ್ಶ ಮಾಡುತ್ತ ಬರೆಯುವುದು ನನಗೆ ಹೆಚ್ಚಿನ ಆನಂದ ಕೊಟ್ಟಿದೆ.

ಪತ್ರಿಕೋದ್ಯಮ, ಹಾಗೆಯೇ ಸಮೂಹ ಮಾಧ್ಯಮಗಳಲ್ಲಿ ಕಾಮ, ಕ್ರೌರ್ಯ, ಭೀಭತ್ಸ ವಿಷಯ - ವಿಚಾರಗಳೇ ಹೆಚ್ಚುತ್ತಿರುವ, ವಿದೇಶೀ ಅನುಕರಣೆ ಮಾಡುತ್ತಿರುವ ಇಂದಿನ ದಿನಗಳಲ್ಲಿ ಇದು ಒಂಟಿದನಿ ಆಗಬಹುದೆಂಬ ಅರಿವು ನನಗೆ ಚೆನ್ನಾಗಿದೆ. ಆದರೆ ಶಾಶ್ವತ ಮೌಲ್ಯಗಳೇ ನಮ್ಮನ್ನು ಉಳಿಸುತ್ತವೆ, ಪ್ರಗತಿಯತ್ತ ಕೊಂಡೊಯ್ಯುತ್ತದೆ ಎಂಬ ಖಚಿತ ಭರವಸೆ ನನ್ನಲ್ಲಿದೆ.

ಜಗತ್ತಿನಲ್ಲಿ ಕರಿಮೋಡ ಮುಸುಕಿ ಮೌಲ್ಯಗಳ ಅಧ:ಪತನದೊಂದಿಗೆ ಅಪಮೌಲ್ಯ ಆಗುತ್ತಿರುವ ಇಂದಿನ ದಿನಗಳಲ್ಲಿ ಬದುಕಿನ ಸ್ವಾರಸ್ಯ, ಮೂಲ ಅರ್ಥ, ಉದ್ದೇಶ, ಗುರಿಗಳ ಅನ್ವೇಷಣೆ ಮಾಡುವುದು ಒಂದು ಖುಷಿ ಕೊಡುವ ಪ್ರಯೋಗ. ಈ ದೆಸೆಯಲ್ಲಿ ಇದೊಂದು ಅಳಿಲು ಸೇವೆ.

ಅದ್ವಿತೀಯ ಖ್ಯಾತ ಪಂಡಿತರೂ ನನ್ನ ಆತ್ಮೀಯ ಸ್ನೇಹಿತರೂ ಆಗಿರುವ ಶತಾವಧಾನಿ ಆರ್. ಗಣೇಶ್ ಅವರು ಈ ಮೂರೂ ಗ್ರಂಥಗಳ ಹಸ್ತಪ್ರತಿಯನ್ನು ಅಮೂಲಾಗ್ರವಾಗಿ ಪರಿಶೀಲಿಸಿ, ಅವಶ್ಯವಿರುವಲ್ಲಿ ತಿದ್ದಿಕೊಟ್ಟಿದ್ದಾರೆ. ಅವರಿಗೆ ಕೃತಜ್ಞತೆಗಳು.

ಬರವಣಿಗೆ-ಅಧ್ಯಯನಗಳಿಗೆ ಯೋಗ್ಯ ವಾತಾವರಣ ಕಲ್ಪಿಸಿ, ಎಲ್ಲ ತರದ ಸಹಕಾರಗಳನ್ನು ಕೊಟ್ಟು, ನನಗೆ ಪೂರ್ಣ ಅವಕಾಶ ಮಾಡಿಕೊಟ್ಟ ನನ್ನ ಬಾಳಸಂಗಾತಿ ಸುದೇಷ್ಣಾ, ಮಕ್ಕಳು ಸಂಸ್ಕೃತಿ, ಗಣೇಶ, ಸಮರ್ಥ ಇವರ ಸಹಕಾರವನ್ನು ನೆನೆಯುತ್ತೇನೆ. ಡಿ.ಟಿ.ಪಿ. ಯನ್ನು ಆಸಕ್ತಿ-ಶ್ರದ್ಧೆಗಳಿಂದ ಮಾಡಿಕೊಟ್ಟ 'ವಿಶ್ವಾಸ್' ನ ಶ್ರೀ ದತ್ತಾತ್ರಿ ಅವರಿಗೆ ಕೃತಜ್ಞತೆಗಳು. ಪುಸ್ತಕ ನಿರ್ಮಾಣಕ್ಕೆ ಕಾರಣರಾದ ಉಜಿರೆಯ ಮಂಜುಶ್ರೀ ಆಫ್‌ಸೆಟ್ ಪ್ರಿಂಟರ್ಸ್‌ನ ಬಳಗದವರೆಲ್ಲರಿಗೂ ಧನ್ಯವಾದಗಳು.

ಇಲ್ಲಿರುವ ಉಪದೇಶಾಮೃತವೆಲ್ಲವೂ ನಮ್ಮ ಋಷಿ-ಮುನಿಗಳು ಕಾಲ ಪರೀಕ್ಷೆಯಲ್ಲಿ ಪ್ರಯೋಗಿಸಿ, ಗೆದ್ದು ಬಂದ ಅಮೃತಫಲಗಳು. ಅಮೃತಪುತ್ರ-ಪುತ್ರಿಯರೆಲ್ಲ - ಸ್ವಾಮಿ ವಿವೇಕಾನಂದರು ಹೇಳಿದಂತೆ ಅವನ್ನು ಸೇವಿಸಿ ಜೀವನ - ಜಗತ್ತುಗಳನ್ನು ಇನ್ನಷ್ಟು ಸುಂದರ ಮಾಡುವಂತಾಗಲಿ.

**ಸಂತೋಷಕುಮಾರ ಗುಲ್ವಾಡಿ**

ಜನವರಿ 14, 2002 ಸಂಕ್ರಾಂತಿ
201, ಎವರೆಸ್ಟ್ ಎಪಾರ್ಟಮೆಂಟ್
8ನೇಯ ಮೈನ್, ಮಲ್ಲೇಶ್ವರಂ,
ಬೆಂಗಳೂರು 560 003

# ತ್ರಿ-ವಿ-ಕ್ರಮ

## ಮೊದಲನೆಯ ಸಂಪುಟ - ವಿಚಾರ




# ನಮಸ್ಕಾರ

**ದೇ**ವರು, ಗುರು ಹಿರಿಯರು, ಜ್ಞಾನಿಗಳು, ಸಾಧುಸಂತರು, ಮಿತ್ರರು ಇವರ ಮುಂದೆ ತಲೆ ಬಾಗಿ, ಎರಡೂ ಕೈಗಳನ್ನು ಜೋಡಿಸಿ, ನಮ್ರಭಾವದಿಂದ ನಮಸ್ಕಾರ ಮಾಡುವುದರ ಅರ್ಥ ಏನು? ಭಾವವೇನು?

ವಂದನೆ, ಪ್ರಣಾಮ, ಪ್ರಣತಿ, ನತಿ, ನಮನ ಎಂದೂ ಇದನ್ನು ಹೇಳುತ್ತಾರೆ. ಇದು ಕಾಯಾ-ವಾಚಾ-ಮನಸಾ ಮಾಡುವ ಒಂದು ಭಾರತೀಯ ಸಂಕೇತ. ಮಾನಸಿಕ ಹಾಗೂ ದೈಹಿಕ ಕ್ರಿಯೆ. ನಮಸ್ಕಾರ ಮಾಡುವಾಗ ಹೃದಯದ ಹತ್ತಿರ ಕೈ ಜೋಡಿಸುತ್ತಾರೆ. ಕೆಲವರು ತಲೆಯ ಮೇಲೆ ಕೈಗಳನ್ನು ಜೋಡಿಸಿ ವಂದಿಸುತ್ತಾರೆ. ನಮಸ್ಕಾರಗಳಲ್ಲಿ ಹೀಗೆ ನವವಿಧಗಳಿವೆ. ಅದೊಂದು ಹೃದಯ ಸಂವಾದ. ಆತ್ಮಾನುಸಂಧಾನ. ವ್ಯಕ್ತಿಯಿಂದ ವ್ಯೋಮಕ್ಕೆ, ವ್ಯಷ್ಟಿಯಿಂದ ಸಮಷ್ಟಿಯ ಏಕೀಭಾವ.

ಇಡೀ ದೇಹವನ್ನು ಸಮರ್ಪಿಸಿ ಮಾಡುವ - ದೇಹದ ಎಂಟು ಭಾಗಗಳೂ ಭೂಮಿಗೆ ತಗಲಿ ಮಾಡುವ - ನಮಸ್ಕಾರ ಸಾಷ್ಟಾಂಗ ಪ್ರಣಾಮ. ಅದೇ ಶ್ರೇಷ್ಠ. ಅದರ ಲಕ್ಷಣಗಳು -

*ಉರಸಾ ಶಿರಸಾ ದೃಷ್ಟ್ವಾ ಮನಸಾ ವಚಸಾ ತಥಾ ।*
*ಪದ್ಭ್ಯಾಂ ಕರಾಭ್ಯಾಂ ಜಾನುಭ್ಯಾಂ ಪ್ರಣಾಮೋಽಷ್ಟಾಂಗ ಉಚ್ಯತೇ ॥*

ಹೃದಯ, ಮಸ್ತಕ, ಎರಡೂ ಕಾಲು, ಎರಡೂ ಕೈ, ಎರಡು ತೊಡೆಗಳನ್ನು ಭೂಮಿಗೆ ತಗಲಿಸಿ, ದೃಷ್ಟಿ ಮತ್ತು ಮನಸ್ಸನ್ನು ದೇವರೆಡೆಗೆ ಕೇಂದ್ರೀಕರಿಸುವುದೇ ಅಷ್ಟಾಂಗ ಪ್ರಣಾಮ. ಅಲ್ಲಿ ಸರ್ವಾರ್ಪಣಭಾವ.

ನಮಸ್ಕಾರ ಎಂಬುದು ಕೇವಲ ಬಹಿರಂಗದ ಶಾರೀರಿಕ ಕ್ರಿಯೆ ಮಾತ್ರವಲ್ಲ. ಅಲ್ಲಿ ಮನಸ್ಸು, ಬುದ್ಧಿ, ಹೃದಯಗಳೇ ಮುಖ್ಯ. ದೇಹ ಅವುಗಳಿಗೆ ಅಧೀನವಲ್ಲವೆ?

ನಮಸ್ಕಾರದ ಮೂಲ ತತ್ತ್ವ ವಿನಯ, ವಿನಮ್ರತೆ. ಇಂಗ್ಲಿಷಿನ Humble ಹಾಗೂ ಕನ್ನಡದ ಹಂಬಲ ಎರಡೂ ಅಲ್ಲಿ ಪ್ರಕಟ.

ಹಿರಿಯರ ಚರಣಸ್ಪರ್ಶ ಮಾಡುವುದು ಭಾರತೀಯ ಪರಂಪರೆ. ಅದರಿಂದ ಅವರ ಶಕ್ತಿಪಾತ ಕಿರಿಯರಿಗೆ ದೊರಕುತ್ತದೆ.

'ಸಂಸ್ಕಾರ ಪ್ರಕಾಶ' ದಲ್ಲಿ ಯಾರು ಯಾರಿಗೆ ಹೇಗೆ ನಮಸ್ಕಾರ ಮಾಡಬೇಕು ಎಂಬ ವಿವರಗಳಿವೆ. ಆಡಿನ ಕಿವಿಗಳಂತೆ ಕೈ ಜೋಡಿಸಿ ವಿದ್ವಾಂಸರಿಗೆ, ಅಂಜಲಿ ಸಂಪುಟ ಜೋಡಿಸಿ ಯತಿ (ಸಂನ್ಯಾಸಿ) ಗಳಿಗೆ, ಒಂದು ಕೈ ಮೇಲೆತ್ತಿ (ಇಂದು ಹಾಯ್ ಎಂದು ವಿದೇಶೀ ಶೈಲಿಯಲ್ಲಿ ಮಾಡುವಂತೆ) ಮೂರ್ಖನಿಗೆ ನಮಸ್ಕಾರ ಮಾಡಬೇಕು.

ದೇವರಿಗೆ ನವವಿಧಾ ಭಕ್ತಿರೂಪ (ಶ್ರವಣ, ಕೀರ್ತನ, ಸ್ಮರಣ, ಪಾದಸೇವನ, ಅರ್ಚನ, ವಂದನ, ದಾಸ್ಯ, ಸಖ್ಯ, ಆತ್ಮನಿವೇದನ) ಮತ್ತು ಷೋಡಶೋಪಚಾರ ಪೂಜೆ (ಆವಾಹನ, ಆಸನ, ಪಾದ್ಯ, ಅರ್ಘ್ಯ, ಆಚಮನ, ಸ್ನಾನ, ವಸ್ತ್ರ ಯಜ್ಞೋಪವೀತ, ಗಂಧ, ಪುಷ್ಪ, ಧೂಪ, ದೀಪ, ನೈವೇದ್ಯ, ಮಂತ್ರಪುಷ್ಪ, ಪ್ರದಕ್ಷಿಣೆ, ನಮಸ್ಕಾರ) ಯಲ್ಲಿ ನಮಸ್ಕಾರಕ್ಕೆ ತುಂಬ ಮಹತ್ತ್ವ

ನಮಸ್ಕಾರ - ಬದುಕಿನ ಭಾಗ್ಯಕ್ಕೆ ಪುರಸ್ಕಾರ. ಅದೊಂದು ಚುಟುಕು ಪೂಜೆ.





# ಜೀವನ ದೃಷ್ಟಿ

**ಜೀ**ವನವನ್ನು ನಾವು ಯಾವ ರೀತಿ ನೋಡಬೇಕು?

ಒಂದಾನೊಂದು ಕಾಲದಲ್ಲಿ ಇಬ್ಬರು ಪಾಳೆಯಗಾರರು ಇದ್ದರು. ಮೊದಲನೆಯವನು ಸಾಧು ಸ್ವಭಾವದ ದೈವಭೀರು. ಇತರರ ತಂಟೆಗೆ ಹೋಗದೆ ತನ್ನಷ್ಟಕ್ಕೇ ಇದ್ದವನು. ಎರಡನೆಯವನು ಮುಂಗೋಪಿ. ಮೊದಲನೆಯ ಪಾಳೆಯಗಾರನಿಗೆ ಸತತ ಉಪಟಳ ಕೊಡುವುದರಲ್ಲೇ ರಾಕ್ಷಸೀ ಆನಂದ ಪಡೆಯುತ್ತಿದ್ದ.

ಆ ಸಾಧು ಪಾಳೆಯಗಾರನಲ್ಲಿ ಒಮ್ಮೆ ಒಬ್ಬ ಸಂನ್ಯಾಸಿ ಬಂದ. ಅವನಲ್ಲಿ ಆ ಪಾಳೆಯಗಾರ ತನ್ನ ಎಲ್ಲ ಸಂಕಷ್ಟ ನಿವೇದಿಸಿಕೊಂಡ. ಅವನ ಮೇಲೆ ಕರುಣೆ ತೋರಿ ಆ ಸಂನ್ಯಾಸಿ ಒಂದು ಕಾಗದದಲ್ಲಿ ಗುಪ್ತಮಂತ್ರ ಬರೆದು, ತಾಯಿತದಲ್ಲಿ ಹಾಕಿ, ಅದನ್ನು ಮುಚ್ಚಿ ಅವನ ಕೈಗೆ ಕಟ್ಟಿದ.

''ಈ ತಾಯಿತವನ್ನು ತೆಗೆದು ಒಳಗೇನಿದೆ ಎಂದು ನೋಡಬೇಡ. ಮುಂದಿನ ಕ್ಷಣದಲ್ಲಿ ನಿನ್ನ ವೈರಿಯ ಕೈಯಲ್ಲಿ ನಿನ್ನ ಸಾವು ಖಚಿತ. ಬೇರೆ ಉಪಾಯವೇ ಇಲ್ಲ ಎಂದಾಗ ಮಾತ್ರ ಈ ತಾಯಿತ ಒಡೆದು ಒಳಗಿಟ್ಟಿರುವ ರಹಸ್ಯಮಂತ್ರ ಓದಿ ನೋಡು. ದೇವರು ನಿನ್ನನ್ನು ರಕ್ಷಿಸುತ್ತಾನೆ'' ಎಂದು ಹೇಳಿ ಹೋಗಿಬಿಟ್ಟ.

ಕೆಲವೇ ದಿನಗಳಲ್ಲಿ ಆ ಕೆಟ್ಟ ಪಾಳೆಯಗಾರ ಈ ಸಾಧು ಪಾಳೆಯಗಾರನ ಮೇಲೆರಗಿ, ಆಕ್ರಮಣ ಮಾಡಿ ಅಟ್ಟಿಸಿಕೊಂಡು ಬಂದ. ಪ್ರಾಣಭಯದಿಂದ ಪಾಪದ ಪಾಳೆಯಗಾರ ಪರಾರಿ. ಅವನನ್ನು ಕೊಲ್ಲಲು ಕ್ರೂರ ಪಾಳೆಯಗಾರ ತನ್ನ ಖಡ್ಗ ಝುಳಪಿಸುತ್ತ ಕುದುರೆಯ ಮೇಲೆ ಓಡೋಡಿ ಬಂದ.

ಓಡಿ ಬಂದ ಸಾಧು ಪಾಳೆಯಗಾರ ಒಂದು ನದಿಯ ದಡದ ಬಳಿ ಮುಟ್ಟಿದ. ಆಳವಾದ ನದಿಯಲ್ಲಿ ಇಳಿಯುವಂತಿಲ್ಲ. ಹಿಂದಿನಿಂದ ಶತ್ರು ದೌಡಾಯಿಸಿಕೊಂಡು ಬರುತ್ತಲೇ ಇದ್ದಾನೆ. ಏನು ಮಾಡಬೇಕು?

ಕೊನೇಯ ಉಪಾಯವೆಂದರೆ ಸಂನ್ಯಾಸಿ ಕೊಟ್ಟ ಮಂತ್ರ ಪ್ರಯೋಗ ಒಂದೇ ದಾರಿ. ಕೂಡಲೇ ತಾಯಿತ ತೆರೆದು ಅದರಲ್ಲಿ ಬರೆದದ್ದನ್ನು ಓದಿದ. 'ಜೀವನದಲ್ಲಿ ಎಲ್ಲವೂ ಹಾದು ಹೋಗುತ್ತದೆ. ನಿಶ್ಚಿಂತೆಯಿಂದಿರು. ನಿಶ್ಚಿಂತೆಯಿಂದಿರು' - ಈ ಆರು ಶಬ್ದಗಳು ಮಾತ್ರ ಇದ್ದುವು ಅಷ್ಟೆ.

ಅಷ್ಟರಲ್ಲಿ ಆ ಕ್ರೂರ ಪಾಳೆಯಗಾರ ಬಂದೇ ಬಿಟ್ಟ. ಇವನ ಮೇಲೆ ಎರಗಬೇಕು ಎಂದಾಗ ಸಾಧು ಸ್ವಭಾವದ ಪಾಳೆಯಗಾರ ಪಕ್ಕಕ್ಕೆ ಸರಿದುಬಿಟ್ಟ. ಓಡಿ ಬಂದ ರಭಸಕ್ಕೆ ಕ್ರೂರ ಪಾಳೆಯಗಾರ ನದಿಯಲ್ಲಿ ಬಿದ್ದು ಸತ್ತು ಹೋದ. ಸಾಧು ಪಾಳೆಯಗಾರ ಬದುಕಿದ. ಎಲ್ಲವೂ ಒಂದು ಕ್ಷಣದಲ್ಲಿ ನಡೆದುಹೋಯಿತು.

ಅವನಿಗೆ ಸಂನ್ಯಾಸಿಯು 'ಮಂತ್ರ' ದ ಅರ್ಥ ಈಗ ಚೆನ್ನಾಗಿ ಆಯಿತು. ಜೀವನದಲ್ಲಿ ಎಲ್ಲವೂ ನಾಟಕದಂತೆ ಹಾದುಹೋಗುತ್ತದೆ. ಇಲ್ಲಿ ಎಲ್ಲವೂ ಕ್ಷಣಿಕ. ಚಂಚಲ. ಅದನ್ನೆಲ್ಲ ಮನಸ್ಸಿಗೆ ಹಚ್ಚಿಕೊಳ್ಳದೆ ತನ್ನ ಕರ್ತವ್ಯವನ್ನು ನಿಶ್ಚಿಂತೆಯಾಗಿ ಮಾಡುವುದೇ ವಿವೇಕ ಎಂಬ ಪಾಠವನ್ನು ಅವನು ಕಲಿತುಕೊಂಡ.

ಬದುಕಿನಲ್ಲಿ ಸಮಸ್ಯೆ-ಸಂಕಷ್ಟಗಳು ಇಲ್ಲದವರು ಯಾರು? ಅವು ನಮ್ಮ ಜತೆಯಲ್ಲೇ, ನಾವು ಇರುವ ತನಕ ಇದ್ದೇ ಇರುತ್ತವೆ. ಮನಸ್ಸಿನ ಮೇಲೆ ಹಿಡಿತವಿಟ್ಟುಕೊಂಡು ನಿಶ್ಚಿಂತೆಯಿಂದ ಇರುವುದೇ ನೆಮ್ಮದಿಯ ರಹಸ್ಯ. ಪ್ರಯತ್ನಪೂರ್ವಕ ಇದನ್ನು ರೂಢಿಸಿಕೊಳ್ಳಬೇಕು.





# ದೇಹವೆಂಬ ದೋಣಿ

**ನಾ**ವು ಏಕೆ ಹುಟ್ಟಿದ್ದೇವೆ? ನಾವು ಎಲ್ಲಿಗೆ ಹೋಗುತ್ತೇವೇ? ಈ ಜೀವನದ ಉದ್ದೇಶವೇನು?

ಚಿರಂತನ ಪ್ರಶ್ನೆಗಳಿವು. ಅದರ ಬಗ್ಗೆ ಸಾವಿರಾರು ವ್ಯಾಖ್ಯಾನಗಳು, ಪ್ರಯೋಗಗಳು, ವಾದವಿವಾದಗಳು.

ಪ್ರಶ್ನೆ ಪ್ರಶ್ನೆಯಾಗಿಯೇ ಉಳಿದಿದೆ. ವ್ಯಾಖ್ಯಾನಗಳು ಇನ್ನೂ ನಡೆದಿವೆ. ಪ್ರಯೋಗಗಳು ಮುಂದುವರಿದಿವೆ. ವಾದ-ವಿವಾದಗಳೂ ಬಿಟ್ಟಿಲ್ಲ.

ವಿಷ್ಣುಪುರಾಣದಲ್ಲಿ ಈ ಬದುಕಿನ ಕತೆಯ ಚಿತ್ರಣವಿದೆ.

*ಬಾಲ್ಯೇ ಕ್ರೀಡನಕಾಸಕ್ತಾ ಯೌವನೇ ವಿಷಯೋನ್ಮುಖಾಃ ।*
*ಅಜ್ಞಾ ನಯಂತ್ಯಶಕ್ತ್ಯಾ ಚ ವಾರ್ಧಕ್ಯಂ ಸಮುಪಸ್ಥಿತಂ ॥*

ಮೂರ್ಖರು ಬದುಕನ್ನು ಹೇಗೆ ಕಳೆಯುತ್ತಾರೆ? ಇಲ್ಲಿ ಕಳೆಯು ಎಂಬ ಶಬ್ದವೂ ಅರ್ಥಗರ್ಭಿತ. ಬದುಕಿಗೆ ಕೂಡಿಸುವ ಬದಲು ಕಳೆಯುವುದು ಎಂಥ ಪುರುಷಾರ್ಥ? ಬಾಲ್ಯವನ್ನು ಆಟದಲ್ಲಿ, ತಾರುಣ್ಯವನ್ನು ಸುಖಭೋಗಗಳಲ್ಲಿ, ವಿಷಯಾಸಕ್ತಿಗಳಲ್ಲಿ, ಮುದಿತನವನ್ನು ಶಕ್ತಿಗುಂದಿ ಕಳೆಯುತ್ತಿದ್ದಾರೆ. ಬದುಕನ್ನು ಎಷ್ಟು ವ್ಯರ್ಥ ಮಾಡಿಕೊಳ್ಳುತ್ತಾರೆ! ನಾವೆಲ್ಲ ಆತ್ಮವಿಮರ್ಶೆ ಮಾಡಿಕೊಂಡು, ಕಳೆಯುವ, ಕೂಡಿಸುವ, ಲೆಕ್ಕ ಮಾಡಿ, ನಮ್ಮ ಜೀವನದ ಬ್ಯಾಲೆನ್ಸ್ ಶೀಟ್ ತೆಗೆದು ನೋಡೋಣ.

ಮದ್ದಳೆಯೊಳಗಣ ಇಲಿಯಾಗಿದ್ದೇವೆ. ಒಂದು ಬದಿಯಲ್ಲಿ ಡಂ

ಎಂದು ಹೊಡೆದಾಗ ಇನ್ನೊಂದು ಕಡೆಗೆ ಓಡುತ್ತೇವೆ. ಅಲ್ಲಿ ಸುಖ ಸಿಗುತ್ತದೆ ಎಂಬ ಭ್ರಾಂತಿ. ಅಲ್ಲಿ ಡಂ ಆಗುತ್ತದೆ. ಮತ್ತೆ ಈ ಕಡೆ ಓಟ. ಹೀಗೆ ಸಾಗಿದ ಬದುಕಿಗೆ ಅರ್ಥವಿದೆಯೆ?

ಸಂಸಾರವೆಂಬ ಸಾಗರವನ್ನು ದಾಟಲು ನಮಗೆ ದೇಹವೆಂಬ ಈ ದೋಣಿ ಇದೆ. ಇದೊಂದು ಅದ್ಭುತ ವಾಹನ. ಅದನ್ನು ಎಷ್ಟು ಚೆನ್ನಾಗಿ, ಎಷ್ಟು ಮಂದಿಗೆ ಉಪಯುಕ್ತವಾಗುವಂತೆ ಬಳಸುತ್ತೇವೆ ಎಂಬುದರಲ್ಲಿ ದೋಣಿಯ ಮಹಾತ್ಮ್ಯವಿದೆ. ಜೀವನ ಸಾರ್ಥಕ್ಯಕ್ಕಾಗಿ ಈ ದೇಹವನ್ನು, ದೇಹದೊಳಗಿರುವ ಮನಸ್ಸು, ಬುದ್ಧಿ, ವಿಚಾರ, ವಿವೇಕಗಳನ್ನು ನಮ್ಮೆಲ್ಲರ ವಿಕಾಸಕ್ಕಾಗಿ ಉಪಯೋಗಿಸುವುದೇ ಜೀವನದ ಅಂತಿಮ ಗುರಿ.

ಈ ಜೀವನ ಒಂದು ಪ್ರಯೋಗ. ಒಂದು ಅನ್ವೇಷಣೆ. ಒಂದು ರಹಸ್ಯ. ಅದರ ಹಲವು ಮುಖಗಳ ಅನುಭವಗಳಿಂದ ವಾಮನರಾಗಿದ್ದವರು ತ್ರಿವಿಕ್ರಮರಾಗಬಹುದು. ಅದು ಪ್ರತಿಯೊಬ್ಬರಿಗೂ ಭಿನ್ನ. ಭಿನ್ನ.

ಈ ದೇಹದ ಅಂಕುಶ ಮನಸ್ಸು. ಅದನ್ನು ನಿಯಂತ್ರಣದಲ್ಲಿಟ್ಟು ಕೊಂಡರೆ ಎಲ್ಲವೂ ಸುಸೂತ್ರ. ಅದರ ಪ್ರಯತ್ನವೇ ಜೀವನ ವ್ಯಾಪಾರ. ಕಠೋಪನಿಷತ್ತಿನಲ್ಲಿ 'ಈ ಶರೀರವೇ ರಥ, ಬುದ್ಧಿಯೇ ಸಾರಥಿ, ಇಂದ್ರಿಯಗಳೆಂಬ ಕುದುರೆಗಳನ್ನು ನಿಯಂತ್ರಿಸುವ ಹಗ್ಗವೇ ಮನಸ್ಸು' ಎಂದಿದೆ.

ಮನು ಮಹರ್ಷಿ ಒಂದು ಮಾತು ಹೇಳಿದ್ದಾನೆ :

ಯಾರ ಮನಸ್ಸು ತೃಪ್ತಿಯನ್ನು ಹೊಂದಿರುತ್ತದೆಯೋ ಅವನಿಗೆ ಮೂರು ಲೋಕದ ಸಂಪತ್ತುಗಳೂ ಸಿಕ್ಕಿದಂತೆ. ಪಾದರಕ್ಷೆಗಳನ್ನು ತೊಟ್ಟವನಿಗೆ ನೆಲಕ್ಕೆಲ್ಲ ಚರ್ಮ ಹಾಸಿದಂತೆ ಸುಸೂತ್ರ, ಸುರಕ್ಷಿತ ತಾನೆ?



# ಶ್ರದ್ಧಾ

**ಬ**ದುಕಿನಲ್ಲಿ ಯಾವುದೇ ಕೆಲಸವನ್ನು ಹಿಡಿದರೆ ಅದನ್ನು ಚೆನ್ನಾಗಿ, ತೃಪ್ತಿಕರವಾಗಿ ಮಾಡುವ ಒಂದು ಮಾನಸಿಕ ಗುಣ. ನೂರು ವರ್ಷಗಳ ಹಿಂದೆ ಸ್ವಾಮಿ ವಿವೇಕಾನಂದರು ''ನಮ್ಮ ದೇಶದಿಂದ ಶ್ರದ್ಧೆಯೇ ಮಾಯವಾಗುತ್ತಿದೆಯಲ್ಲ?'' ಎಂದು ನೊಂದು ನುಡಿದಿದ್ದರು. ಅದು ಇಂದು ಇನ್ನಷ್ಟು ಹೆಚ್ಚು ಮಾಯವಾಗಿದೆ.

ಶ್ರತ್ ಅಂದರೆ ಸತ್ಯ. ಯಾವ ಸತ್ಯದಲ್ಲಿ ನಂಬಿಕೆ ಇಡುತ್ತೇವೆಯೋ ಅದೇ ಶ್ರದ್ಧೆ. ಧರ್ಮ, ಅರ್ಥ, ಕಾಮ, ಮೋಕ್ಷ ಸಾಧನೆಗೆ ಬುದ್ಧಿ ಕೊಡುವ ದೇವತೆಯನ್ನು ಶ್ರದ್ಧಾ ದೇವತೆ ಎಂದು ಪ್ರಾಚೀನ ಭಾರತೀಯರು ಕಲ್ಪಿಸಿಕೊಂಡಿದ್ದರು. ಶ್ರದ್ಧೆ ಎಂಬುದು ಒಂದು ಪವಿತ್ರ ಭಾವವಾಗಿ ಬದುಕನ್ನು ರೂಪಿಸುತ್ತದೆ.

ವೇದಕಾಲದಿಂದಲೂ ಶ್ರದ್ಧೆಯ ಗುಣಗಾನ ಈ ನಾಡಿನಲ್ಲಿ ಸತತ ನಡೆದಿವೆ. ಅದು ಆಚರಣೆಯಲ್ಲೂ ಬಂದಿದೆ. ಋಗ್ವೇದದಲ್ಲಿ ಶ್ರದ್ಧೆಯಿಂದ ಇಷ್ಟಸಿದ್ಧಿಯಾಗುತ್ತದೆ. ಅದು ಯಾವತ್ತೂ ಹೃದಯಸ್ಥ ಆಗಿರಬೇಕು ಎಂಬ ಶ್ರದ್ಧಾ ಸೂಕ್ತವೇ ಇದೆ. ಶ್ರದ್ಧೆಯೇ ಜಗತ್ತಿನ ಆಶ್ರಯಸ್ಥಾನ. ದೇವತೆಗಳಿಗೂ ದೈವತ್ವ ಪ್ರಾಪ್ತಿಯಾಗುವುದು ಶ್ರದ್ಧೆಯಿಂದಲೆ. ಹುಲುಮಾನವನೂ ದೈವತ್ವಕ್ಕೆ ಏರಬೇಕಾದರೆ ಶ್ರದ್ಧೆಯೇ ಸೋಪಾನ.

'ಶ್ರದ್ಧಾವಾನ್ ಲಭತೇ ಜ್ಞಾನಮ್' - ಶ್ರದ್ಧೆಯಿಂದಲೇ ಜ್ಞಾನ ಸಿಗುತ್ತದೆ ಎಂಬ ಗೀತೆಯ ಮಾತು ನೂರಕ್ಕೆ ನೂರು ಸತ್ಯ. ಎಲ್ಲಿ ಬುದ್ಧಿಯ ಕೆಲಸ ಮುಗಿಯುತ್ತದೆಯೋ ಅಲ್ಲಿ ದೈವಿಕತೆಯಿಂದ ಶ್ರದ್ಧೆ ಅದ್ಭುತವಾಗಿ ಕೆಲಸ ಮುಂದುವರಿಸುತ್ತದೆ.

ಅಶ್ರದ್ಧೆ ಎಂಬುದು ಅಸತ್ಯ ಹಾಗೂ ಆತ್ಮಘಾತುಕ. ಶ್ರದ್ಧೆಯಿಂದಲೇ ಆತ್ಮ ವಿಶ್ವಾಸ ಮೂಡುತ್ತದೆ. ಯಾರಿಗೆ ಆತ್ಮವಿಶ್ವಾಸವಿದೆಯೋ ಅವನೇ ಆಸ್ತಿಕ. ಯಾರಿಗೆ ಆತ್ಮವಿಶ್ವಾಸವಿಲ್ಲವೋ ಅವನೇ ನಾಸ್ತಿಕ ಎಂಬ ಸ್ವಾಮಿ ವಿವೇಕಾನಂದರ ಮಾತಿನಲ್ಲಿ ಅದರ ಮೌಲ್ಯ ಸಿದ್ಧವಾಗಿದೆ. ಇಂದಿನ ನಮ್ಮ ಅನೇಕ ಸಮಸ್ಯೆಗಳಿಗೆ ಅಶ್ರದ್ಧೆಯೇ ಕಾರಣ.

ಶ್ರದ್ಧೆಯಿಂದಲೇ ಸಿದ್ಧಿ ಬರುತ್ತದೆ. ಅದಕ್ಕೆ ದೈವಕೃಪೆ ಅತ್ಯಂತ ಅವಶ್ಯ. ಶ್ರದ್ಧೆಯಿಲ್ಲದೆ ಯಾವ ಕೆಲಸವೂ ಯಶಸ್ವಿಯಾಗುವುದಿಲ್ಲ. ಅಶ್ರದ್ಧೆಯೇ ಪಾಪ, ಶ್ರದ್ಧೆಯೇ ಪಾಪಮುಕ್ತ ಮಾಡುತ್ತದೆ ಎಂದು ಮಹಾಭಾರತದಲ್ಲಿ ಹೇಳಿದೆ.

ಯಾರಿಗೆ ಯಾವ ಶ್ರದ್ಧೆಯೋ ಅವರು ಅದೇ ಆಗುತ್ತಾರೆ (ಯೋ ಯಚ್ಛ್ರದ್ಧಃ ಸ ಏವ ಸಃ) ಎಂದು ಭಗವದ್ಗೀತೆ ಹೇಳುತ್ತದೆ.

ಶ್ರದ್ಧೆಯಿಂದ ಮನಸ್ಸು ನಿರ್ಮಲವಾಗುತ್ತದೆ. ಆರೋಗ್ಯ ಲವಲವಿಕೆಯಿಂದ ಕೂಡಿರುತ್ತದೆ. ಬದುಕು ಉತ್ಸಾಹಭರಿತವಾಗುತ್ತದೆ. ಅಶ್ರದ್ಧೆ ಜಡತ್ವಕ್ಕೆ, ದುರಾಚಾರಕ್ಕೆ ಮೂಲ.

ಶ್ರದ್ಧೆ ಯಾವುದು, ಅಂಧಶ್ರದ್ಧೆ ಯಾವುದು ಎಂಬುದನ್ನು ತಿಳಿದುಕೊಳ್ಳುವಷ್ಟು ಬುದ್ಧಿ ಪ್ರತಿಯೊಬ್ಬರಿಗೂ ಇದೆ. ಅದನ್ನು ಬಳಸುವ ರೀತಿಯಲ್ಲಿ ತಾರತಮ್ಯ, ವಿವೇಕಗಳು ನಿಯಂತ್ರಿಸಬೇಕು.

ತನ್ನ ಶ್ರದ್ಧೆಯನ್ನು ಇನ್ನೊಬ್ಬರ ಮೇಲೆ ಬಲಾತ್ಕಾರವಾಗಿ ಇಲ್ಲವೆ ಮೋಹದಿಂದ ಆರೋಪಿಸುವುದು, ಹೇರುವುದು ಅತಿ ಹೀನಾಯ. ಅವರವರ ಶ್ರದ್ಧೆಗೆ ಅವರವರಿಗೆ ಸ್ವಾತಂತ್ರ್ಯ ಇದೆ. ಇರಬೇಕು.

ಶ್ರದ್ಧೆ ಯಶಸ್ಸಿನ ಸೋಪಾನ, ಅದರ ಅನುಷ್ಠಾನಕ್ಕೆ ಸಂಕಲ್ಪ, ಸಾಧನೆಗಳು ಅನಿವಾರ್ಯ.





# ನಿರ್ಮಲ ನಗು

ಅದು ಮಾನವನಿಗೆ ದೊರೆತ ದೈವದತ್ತ ವರದಾನ. ಮಗುವಿನ ನಿರ್ಮಲವಾದ ನಗು ದೈವತ್ವದ ಸಾನ್ನಿಧ್ಯವನ್ನೇ ನಮ್ಮ ಮುಂದೆ ತರುತ್ತದೆ. ಮುಗ್ಧವಾದ ಮಗುವಿನ ನಗುವನ್ನು ಮರೆಯಲು ಸಾಧ್ಯವೇ? ಅದು ಮನಸ್ಸು, ಹೃದಯಗಳಲ್ಲಿ ಹಾಲು ಜೇನು ಹರಿಸುತ್ತದೆ.

ನಗು, ಒಂದೇ ಒಂದು ನಗು ಎಂಥ ಸಮಸ್ಯೆಯನ್ನೂ ಬಗೆಹರಿಸಬಹುದು. ನಗು ಎಂಬುದು ಸೂರ್ಯನ ಕಿರಣದಂತೆ. ನಗು ಎಂಬುದು ಚಂದ್ರನ ಬೆಳಕಿನಂತೆ. ನಗು ಎಂಬುದು ಹೂಗಳ ಕಂಪಿನಂತೆ. ನಗು ಎಂಬುದು ಆಹ್ಲಾದಕರ ತಂಗಾಳಿಯಂತೆ. ಅದು ಬದುಕಿನ ಅತಿ ದೊಡ್ಡ ಬೋನಸ್. ವರದಾನ.

ನಗುವಿನಲ್ಲಿ ಆತ್ಮವಿಶ್ವಾಸವಿದೆ. ನಗುವಿನಲ್ಲಿ ಬದುಕಿನ ಭರವಸೆ ಕಾಣುತ್ತದೆ. ನಗು ಸಾಂಕ್ರಾಮಿಕವಾದಾಗ ಅದರ ಶಕ್ತಿ ನೂರು, ಸಾವಿರ ಪಟ್ಟು ಹೆಚ್ಚುತ್ತದೆ.

ನಗು ಸಹಜ ಧರ್ಮ. ಅದಕ್ಕೇ 'ಮಿಲಿಯನ್ ಡಾಲರ್ ನಗು' ಎಂಬ ನಾಣ್ನುಡಿ. ನಗುವಿನಲ್ಲಿ ಜೀವನದ ಆಸೆಗಳ ಮಿಂಚು ಹೊಳೆಯುತ್ತದೆ. ಆನಂದದ ಅಮೃತ ಧಾರೆ ಹರಿಯುತ್ತದೆ.

ನಗುಮುಖವನ್ನು ಎಲ್ಲರೂ ನೆನಪಿಟ್ಟುಕೊಳ್ಳುತ್ತಾರೆ. ಅಳುವ ಮುಖವನ್ನು ನೋಡಲು ಯಾರೂ ಇಷ್ಟಪಡುವುದಿಲ್ಲ. ಅಳುಬುರುಕರ ಬಗ್ಗೆ ಕನಿಕರ, ಸಂಶಯ, ತಿರಸ್ಕಾರ. ನಗುಮುಖದವರ ಬಗ್ಗೆ ಪ್ರೀತಿ, ವಾತ್ಸಲ್ಯ, ಆತ್ಮೀಯತೆ.

ಆದರೆ ಎಲ್ಲ ನಗುಗಳೂ ನಿರ್ಮಲವಲ್ಲ. 'ನಗುನಗುತ್ತ ಖಳನಾಯಕನಾಗಬಹುದು' ಎಂದು ಶೇಕ್ಸ್‌ಪಿಯರ್ ಕವಿ 'ಹ್ಯಾಮ್ಲೆಟ್'

ಾಟಕದಲ್ಲಿ ಹೇಳಿದ ಮಾತು ನಿಜ. ಅನೇಕರು ನಗುನಗುತ್ತ ಬೆನ್ನಿಗೆ ರಿಯುತ್ತಾರೆ. ಯಾವಾಗಲೂ ನಗುಮುಖದ ಮುಖವಾಡ ಾಕಿದವರನ್ನು ನಂಬಬಾರದು. ಸುಮ್ಮನೆ ನಗುವವರೂ ೂರ್ತರಿರುತ್ತಾರೆ. ಅಪಾಯ ಮಾಡುತ್ತಾರೆ!

ಕೆಲವರಿರುತ್ತಾರೆ. ಜಗತ್ತಿನ ಭಾರ, ದುಃಖ ಸಮಸ್ಯೆಗಳನ್ನೆಲ್ಲ ಅವರ ಲೆಯ ಮೇಲೆ ಒಜ್ಜೆ ಕೂತಂತೆ ಮಾಡುತ್ತಾರೆ. ಯಾವಾಗಲೂ ಮುಖ ಂಟಿಕಿಕೊಳ್ಳುತ್ತಾರೆ. ಅದು ಪ್ರಬುದ್ಧ ಗಾಂಭೀರ್ಯವಲ್ಲ. ಅದು ಕೃತಕ ಹಂಕಾರ. ಅಂಥ ನಂಜಿನ ನಗು ಅಪಾಯಕರ. ಆ ನಗುವಿನಲ್ಲಿ ಕ್ರೌರ್ಯ, ಂಸೆಯ ಛಾಯೆ.

ಈ ಜಗತ್ತಿನಲ್ಲಿ ನಗುವಿನ ಬೆಲೆ ಸರಿಯಾಗಿ ಗೊತ್ತಿದ್ದು, ಅದನ್ನು ೆನ್ನಾಗಿ ಬಳಸಿದ್ದಲ್ಲಿ ಆಗಿರುವ ಜಗಳ, ಕೊಲೆ, ಹಿಂಸೆ, ಅನಾರೋಗ್ಯ, ಾವು, ನೋವು, ಮುಷ್ಕರ, ಯುದ್ಧ, ಶಸ್ತ್ರಕ್ರಿಯೆ, ಹುಚ್ಚರ ಆಸ್ಪತ್ರೆಯ ೋಗಿಗಳ ಸಂಖ್ಯೆ, ಆತ್ಮಹತ್ಯೆ, ಲಂಚ ಎಲ್ಲವೂ ಕಡಿಮೆಯಾಗುತ್ತಿದ್ದವು. ಂದ ಹಾಗೆ ಲಂಚ ತೆಗೆದುಕೊಳ್ಳುವವರ, ಕೊಡುವವರ ನಗು ಕೂಡ ಶಿಷ್ಟವಾಗಿರುತ್ತವೆ, ಅಲ್ಲವೆ?

ಸರಕಾರೀ ಕಛೇರಿಗಳಲ್ಲಿ, ಕೆಂಪು ಬಸ್ಸುಗಳಲ್ಲಿ, ಎಲ್ಲೆಲ್ಲಿ ಸರಕಾರೀ ವಾಡ, ಆಡಳಿತ ಇದೆಯೇ ಅಲ್ಲೆಲ್ಲ ನಗು ಮಂಗಮಾಯ. ಅಥವಾ ೇಶಾವರೀ ನಗು, ದುರಾಸೆಯ ನಗು, ದಾರಿದ್ರ್ಯದ ನಗು.

ನಗದವರು, ಮೂರ್ಖರು, ಹುಚ್ಚರು ಅಥವಾ ಪ್ರಾಣಿಗಳೇ ಾನವ ವೇಷ ಧರಿಸಿರುವವರು.

ಶುದ್ಧ ನಗುವಿಲ್ಲದ ಜಗತ್ತು ಬರೀ ಶೂನ್ಯ, ಅರ್ಥಹೀನ. ನಗುವೇ ೀವನದ ತಿರುಳು, ಜೀವನ ಸಂಜೀವಿನಿ, ನಗು-ನಿರ್ಮಲ ನಗುವೇ ೇವರ ಸಾಕ್ಷಾತ್ಕಾರ.



# ನಿರ್ಮಲ ನಗು

ಅದು ಮಾನವನಿಗೆ ದೊರೆತ ದೈವದತ್ತ ವರದಾನ. ಮಗುವಿನ ನಿರ್ಮಲವಾದ ನಗು ದೈವತ್ವದ ಸಾನ್ನಿಧ್ಯವನ್ನೇ ನಮ್ಮ ಮುಂದೆ ತರುತ್ತದೆ. ಮುಗ್ಧವಾದ ಮಗುವಿನ ನಗುವನ್ನು ಮರೆಯಲು ಸಾಧ್ಯವೇ? ಅದು ಮನಸ್ಸು, ಹೃದಯಗಳಲ್ಲಿ ಹಾಲು ಜೇನು ಹರಿಸುತ್ತದೆ.

ನಗು, ಒಂದೇ ಒಂದು ನಗು ಎಂಥ ಸಮಸ್ಯೆಯನ್ನೂ ಬಗೆಹರಿಸಬಹುದು. ನಗು ಎಂಬುದು ಸೂರ್ಯನ ಕಿರಣದಂತೆ. ನಗು ಎಂಬುದು ಚಂದ್ರನ ಬೆಳಕಿನಂತೆ. ನಗು ಎಂಬುದು ಹೂಗಳ ಕಂಪಿನಂತೆ. ನಗು ಎಂಬುದು ಆಹ್ಲಾದಕರ ತಂಗಾಳಿಯಂತೆ. ಅದು ಬದುಕಿನ ಅತಿ ದೊಡ್ಡ ಬೋನಸ್. ವರದಾನ.

ನಗುವಿನಲ್ಲಿ ಆತ್ಮವಿಶ್ವಾಸವಿದೆ. ನಗುವಿನಲ್ಲಿ ಬದುಕಿನ ಭರವಸೆ ಕಾಣುತ್ತದೆ. ನಗು ಸಾಂಕ್ರಾಮಿಕವಾದಾಗ ಅದರ ಶಕ್ತಿ ನೂರು, ಸಾವಿರ ಪಟ್ಟು ಹೆಚ್ಚುತ್ತದೆ.

ನಗು ಸಹಜ ಧರ್ಮ. ಅದಕ್ಕೇ 'ಮಿಲಿಯನ್ ಡಾಲರ್ ನಗು' ಎಂಬ ನಾಣ್ಣುಡಿ. ನಗುವಿನಲ್ಲಿ ಜೀವನದ ಆಸೆಗಳ ಮಿಂಚು ಹೊಳೆಯುತ್ತದೆ. ಆನಂದದ ಅಮೃತ ಧಾರೆ ಹರಿಯುತ್ತದೆ.

ನಗುಮುಖವನ್ನು ಎಲ್ಲರೂ ನೆನಪಿಟ್ಟುಕೊಳ್ಳುತ್ತಾರೆ. ಅಳುವ ಮುಖವನ್ನು ನೋಡಲು ಯಾರೂ ಇಷ್ಟಪಡುವುದಿಲ್ಲ. ಅಳುಬುರುಕರ ಬಗ್ಗೆ ಕನಿಕರ, ಸಂಶಯ, ತಿರಸ್ಕಾರ. ನಗುಮುಖದವರ ಬಗ್ಗೆ ಪ್ರೀತಿ, ವಾತ್ಸಲ್ಯ, ಆತ್ಮೀಯತೆ.

ಆದರೆ ಎಲ್ಲ ನಗುಗಳೂ ನಿರ್ಮಲವಲ್ಲ. 'ನಗುನಗುತ್ತ ಖಳನಾಯಕನಾಗಬಹುದು' ಎಂದು ಶೇಕ್ಸ್‌ಪಿಯರ್ ಕವಿ 'ಹ್ಯಾಮ್ಲೆಟ್'

ಾಟಕದಲ್ಲಿ ಹೇಳಿದ ಮಾತು ನಿಜ. ಅನೇಕರು ನಗುನಗುತ್ತ ಬೆನ್ನಿಗೆ ರಿಯುತ್ತಾರೆ. ಯಾವಾಗಲೂ ನಗುಮುಖದ ಮುಖವಾಡ ಾಕಿದವರನ್ನು ನಂಬಬಾರದು. ಸುಮ್ಮನೆ ನಗುವವರೂ ೂರ್ತರಿರುತ್ತಾರೆ. ಅಪಾಯ ಮಾಡುತ್ತಾರೆ!

ಕೆಲವರಿರುತ್ತಾರೆ. ಜಗತ್ತಿನ ಭಾರ, ದುಃಖ ಸಮಸ್ಯೆಗಳನ್ನೆಲ್ಲ ಅವರ ಲೆಯ ಮೇಲೆ ಒಜ್ಜೆ ಕೂತಂತೆ ಮಾಡುತ್ತಾರೆ. ಯಾವಾಗಲೂ ಮುಖ ಂಟಿಕಿಕೊಳ್ಳುತ್ತಾರೆ. ಅದು ಪ್ರಬುದ್ಧ ಗಾಂಭೀರ್ಯವಲ್ಲ. ಅದು ಕೃತಕ ಹಂಕಾರ. ಅಂಥ ನಂಜಿನ ನಗು ಅಪಾಯಕರ. ಆ ನಗುವಿನಲ್ಲಿ ಕ್ರೌರ್ಯ, ಂಸೆಯ ಛಾಯೆ.

ಈ ಜಗತ್ತಿನಲ್ಲಿ ನಗುವಿನ ಬೆಲೆ ಸರಿಯಾಗಿ ಗೊತ್ತಿದ್ದು, ಅದನ್ನು ನ್ನಾಗಿ ಬಳಸಿದ್ದಲ್ಲಿ ಆಗಿರುವ ಜಗಳ, ಕೊಲೆ, ಹಿಂಸೆ, ಅನಾರೋಗ್ಯ, ಾವು, ನೋವು, ಮುಷ್ಕರ, ಯುದ್ಧ, ಶಸ್ತ್ರಕ್ರಿಯೆ, ಹುಚ್ಚರ ಆಸ್ಪತ್ರೆಯ ೋಗಿಗಳ ಸಂಖ್ಯೆ, ಆತ್ಮಹತ್ಯೆ, ಲಂಚ ಎಲ್ಲವೂ ಕಡಿಮೆಯಾಗುತ್ತಿದ್ದವು. ಂದ ಹಾಗೆ ಲಂಚ ತೆಗೆದುಕೊಳ್ಳುವವರ, ಕೊಡುವವರ ನಗು ಕೂಡ ಶಿಷ್ಟವಾಗಿರುತ್ತವೆ, ಅಲ್ಲವೆ?

ಸರಕಾರೀ ಕಛೇರಿಗಳಲ್ಲಿ, ಕೆಂಪು ಬಸ್ಸುಗಳಲ್ಲಿ, ಎಲ್ಲೆಲ್ಲಿ ಸರಕಾರೀ ವಾಡ, ಆಡಳಿತ ಇದೆಯೇ ಅಲ್ಲೆಲ್ಲ ನಗು ಮಂಗಮಾಯ. ಅಥವಾ ೀಶಾವರೀ ನಗು, ದುರಾಸೆಯ ನಗು, ದಾರಿದ್ರ್ಯದ ನಗು.

ನಗದವರು, ಮೂರ್ಖರು, ಹುಚ್ಚರು ಅಥವಾ ಪ್ರಾಣಿಗಳೇ ಾನವ ವೇಷ ಧರಿಸಿರುವವರು.

ಶುದ್ಧ ನಗುವಿಲ್ಲದ ಜಗತ್ತು ಬರೀ ಶೂನ್ಯ, ಅರ್ಥಹೀನ. ನಗುವೇ ೀವನದ ತಿರುಳು, ಜೀವನ ಸಂಜೀವಿನಿ, ನಗು-ನಿರ್ಮಲ ನಗುವೇ ೀವರ ಸಾಕ್ಷಾತ್ಕಾರ.



# ಸ್ನೇಹ

ಬದುಕಿನಲ್ಲಿ ಅತ್ಯಂತ ಆತ್ಮೀಯ, ಸೂಕ್ಷ್ಮ ಹಾಗೂ ಮಧುರ ಬಂಧವಿದು. ಗೆಳೆತನದ ಸಂಬಂಧದಲ್ಲಿ ಹೃದಯವಂತಿಕೆ, ಔದಾರ್ಯ, ಪ್ರೀತಿ, ಕ್ಷಮಾಗುಣ, ಸಹಾಯಹಸ್ತದ ಹಲವು ಮೌಲ್ಯಗಳು ಬೆಸೆದುಕೊಂಡಿವೆ.

ಗೆಳೆತನ ಎಂಬುದು ದೇಶ-ಕಾಲ-ಪರಿಸ್ಥಿತಿ ಮೀರಿ ಬೆಳೆಯುವ ಒಂದು ಗುಣಧರ್ಮ, ಅದಕ್ಕೆ ಲಿಂಗಭೇದದ ಕಟ್ಟುಪಾಡುಗಳೂ ಇರಬೇಕೆಂದಿಲ್ಲ, 'ಗರ್ಲ್‌ಫ್ರೆಂಡ್', 'ಬ್ಯಾಫ್ರೆಂಡ್' ಎಂಬ ಪಾಶ್ಚಾತ್ಯ ಅಭಿವ್ಯಕ್ತಿಯಲ್ಲಿ ಕೀಳು ಕಾಮನೆ ಹಾಗೂ ದೈಹಿಕ ವಾಸನೆಯ ಮಟ್ಟ ಮಾತ್ರ ಕಾಣುತ್ತದೆ. ನಿಜವಾದ ಸ್ನೇಹ ಇವೆಲ್ಲ ಚೌಕಟ್ಟುಗಳನ್ನೂ ಮೀರಿರುತ್ತದೆ.

ಗ್ರೀಕ್ ತತ್ತ್ವಜ್ಞಾನಿ ಆರಿಸ್ಟಾಟಲ್ ಹೇಳಿಕೆಯಂತೆ ಸ್ನೇಹ ಎಂಬುದು ಚಾರಿತ್ರ್ಯ ಮತ್ತು ಶೀಲಗಳಷ್ಟೆ ಪವಿತ್ರ. ಅವನ ಅಭಿಪ್ರಾಯದಂತೆ ಮೂರು ಬಗೆಯ ಸ್ನೇಹವರ್ಗಗಳಿವೆ.

- ಕೇವಲ ಸಖ್ಯಕ್ಕಾಗಿ, ಖುಷಿಗಾಗಿ ಮಾಡುವ ಸ್ನೇಹ.
- ಬದುಕಿನ ಸೌಲಭ್ಯ, ಸುಖಗಳಿಗಾಗಿ ಉಪಯೋಗಿಸುವ ಸ್ನೇಹ.
- ಪರಸ್ಪರ ಗೌರವ, ಶುದ್ಧ ಪ್ರೀತಿ, ಏನನ್ನೂ ಅಪೇಕ್ಷಿಸದ ಸಖ್ಯ.

ಇವುಗಳಲ್ಲಿ ಕೊನೆಯದೇ ಅತ್ಯಂತ ಮಹತ್ವದ್ದು. ಈ ಸ್ನೇಹ ತಂದೆ, ತಾಯಿ, ಬಂಧು-ಬಳಗ, ಗುರು-ಶಿಷ್ಯ ಮತ್ತು ಇತರ ಸ್ನೇಹಿತರ ಜತೆಯೂ ಇರಬಹುದು. ಅದರ ಸಂಬಂಧಗಳು ಬಲು ಸೂಕ್ಷ್ಮ. ನವಿರು ನವಿರು.

ಸ್ನೇಹದಲ್ಲಿ ಮುಖ್ಯಭಾವ ಸಮಾನತೆ, ಸಹೃದಯತೆ ಮತ್ತು ಸಹಜ

ಗುಣ. ಗೆಳೆತನ ಎಂಬುದು ದೇವರು ಕೊಟ್ಟ ಉಡುಗೊರೆ, ಅತಿ ದೊಡ್ಡ ಬೋನಸ್, ಅದರಲ್ಲಿ ದೈವಿಕ ಸಾನ್ನಿಧ್ಯ ಅನುಭವಿಸಿದಾಗಲೇ ಅದರ ಸಾರ್ಥಕತೆ, ಪಾವಿತ್ರ್ಯ ರಕ್ಷಣೆ.

ನಿಜವಾದ ಗೆಳೆತನದಲ್ಲಿ ಶಾಂತಿ ಮತ್ತು ಸಮಾಧಾನಗಳು ನೆಲಸುತ್ತವೆ. ಅದರಲ್ಲಿ ವಿವರಿಸಲಾಗದ ಆನಂದದ ಕ್ಷಣಗಳಿರುತ್ತವೆ. ಐಕ್ಯಭಾವದ ಸಂತೋಷವಿರುತ್ತದೆ. ಅದು ದೈವೀ ಸಾಕ್ಷಾತ್ಕಾರಕ್ಕೆ ಸಮ.

ರಾಮಾಯಣ ಮತ್ತು ಮಹಾಭಾರತಗಳಲ್ಲಿ ಸಖ್ಯಭಾವದ ಬಗ್ಗೆ ಹೇಳುವಾಗ ರಾಮ ಮತ್ತು ಹನೂಮಂತ ಹಾಗೂ ಕೃಷ್ಣ ಮತ್ತು ಅರ್ಜುನರ ಉದಾಹರಣೆಯನ್ನು ಕೊಡುತ್ತಾರೆ. ಈ ಸಖ್ಯಭಾವ ಸುಖೀರೂಪದಲ್ಲಿ ಭಕ್ತಿಯ ಮಟ್ಟಕ್ಕೂ ಏರುತ್ತದೆ.

ಅದಕ್ಕಾಗಿಯೇ ಹನೂಮಂತ ತನ್ನ ಮತ್ತು ರಾಮನ ಸಂಬಂಧವನ್ನು ಹೇಳುವಾಗ 'ದೇಹಬುದ್ಧಿಯಿಂದ ಯಜಮಾನ ಮತ್ತು ಸೇವಕ, ಆತ್ಮಬುದ್ಧಿಯಿಂದ ನಾವಿಬ್ಬರೂ ಒಂದೇ' ಎನ್ನುವುದು. ಇದು ಭಾರತೀಯ ದೃಷ್ಟಿಯ ಸ್ನೇಹದ ಪರಾಕಾಷ್ಠೆ..

ಸ್ನೇಹ ಬಂಧ ಜೀವನದ ಎಲ್ಲ ರಂಗಗಳಲ್ಲೂ ಎಲ್ಲ ಸಂಬಂಧಗಳಲ್ಲೂ, ವ್ಯವಹಾರದಲ್ಲೂ ನಮ್ಮನ್ನು ಒಂದು ಮಾಡುವ, ಬೆಸೆಯುವ, ಜೀವನಸೂತ್ರ. ಸ್ನೇಹ ಅತ್ಯಂತ ಜೋಪಾನವಾಗಿ ಪೋಷಿಸಿಕೊಂಡು ಬರಬೇಕಾದ ಬದುಕಿನ ಅತಿ ಪವಿತ್ರ, ಶ್ರೀಮಂತ ಸೊತ್ತು.



# ಶ್ರೇಯ ಮತ್ತು ಪ್ರೇಯ

**ನಾ**ವೆಲ್ಲರೂ ಬದುಕಿನಲ್ಲಿ ಸುಖವನ್ನೇ ಬಯಸುತ್ತೇವೆ. ಸುಖವನ್ನೇ ಅರಸಿ ಹೋಗುತ್ತೇವೆ. ಮತ್ತೆ ಮತ್ತೆ ನಮ್ಮ ಅನುಭವಕ್ಕೆ ಬರುವ ಸಂಗತಿಯೆಂದರೆ ಸುಖ ಎಂಬುದು ಒಂದು ಮರೀಚಿಕೆ.

ಸುಖದಲ್ಲೂ ಎರಡು ಬಗೆ. ಭೌತಿಕ ಸುಖವನ್ನು 'ಪ್ರೇಯ' ಎನ್ನುತ್ತಾರೆ. ಇದು ತಾತ್ಕಾಲಿಕ, ಚಂಚಲ. ಬರುತ್ತಿರುವಂತೆಯೇ ಮಾಯವಾಗುತ್ತದೆ. ಕಣ್ಣು ಮುಚ್ಚಾಲೆಯಾಡುತ್ತಲೇ ಇರುತ್ತದೆ.

'ಶ್ರೇಯ' ಎಂದರೆ ಆಧ್ಯಾತ್ಮಿಕ ಸುಖ, ಇದು ಸ್ಥಿರ, ಶಾಶ್ವತ.

ಪ್ರೇಯ ಆರಂಭದಲ್ಲಿ ಸುಖ ಕೊಡುವ ಸೋಗನ್ನು ಹಾಕುತ್ತದೆ. ಆದರೆ ಅಂತಿಮವಾಗಿ ಅದರಲ್ಲಿ ದುಃಖವೇ ಉಂಟಾಗುತ್ತದೆ. ಶ್ರೇಯ ಆರಂಭದಲ್ಲಿ ಕಷ್ಟಕರ, ನೋವಿನಿಂದ ಕೂಡಿದ್ದು ಎಂಬಂತೆ ಭಾಸವಾಗುತ್ತದೆ. ಶ್ರೇಯವು ನಮ್ಮ ಸತ್ವಪರೀಕ್ಷೆಯನ್ನು ಹಲವು ರೀತಿಯಲ್ಲಿ ಮಾಡುತ್ತದೆ. ಅಗ್ನಿಪರೀಕ್ಷೆಯಲ್ಲಿ ಗೆದ್ದವರಿಗೆ ಶ್ರೇಯಸ್ಸು ದೊರೆಯುತ್ತದೆ. ಶ್ರೇಯದಿಂದ ಮಾನವ ಕಲ್ಯಾಣವಾಗುತ್ತದೆ.

ಪ್ರೇಯ ಮನುಷ್ಯನನ್ನು ಪಲಾಯನವಾದಿಯನ್ನಾಗಿ, ಜೀವನ ವಿಮುಖನನ್ನಾಗಿ ಮಾಡುತ್ತದೆ. ಅವನನ್ನು ಪುರುಷಾರ್ಥದಿಂದ ದೂರ ದಬ್ಬುತ್ತದೆ. ಪ್ರೇಯ ಅರಸಿ ಹೋಗುವವರು ಹೇಡಿಗಳು. ಪ್ರೇಯದ ಆಕರ್ಷಣೆಗೆ ಒಳಗಾದವರು ಇಹಲೋಕದ ಸುಖಸಂಪತ್ತಿಗೆ - ಕೈ-ಮೈ-ಬಾಯಿ ಚಾಚುತ್ತಾರೆ. ಈ ಇಂದ್ರಿಯ ಸುಖಲೋಲುಪತನ ಹಲವು ದುಃಖಗಳಿಗೆ ಮೂಲ, ಅದರಲ್ಲಿ ರಾಜಸಿಕ ಹಾಗೂ ತಾಮಸಿಕ ಗುಣಗಳೇ ತುಂಬಿರುತ್ತವೆ.

ಶ್ರೇಯ ಸಾಧನೆಯಲ್ಲಿ ಕೊಡುವುದು, ತ್ಯಾಗಮಾಡುವುದರಲ್ಲಿ ಆನಂದ ಸಿಗುತ್ತದೆ. ಪ್ರೇಯದಲ್ಲಿ ಬಚ್ಚಿಟ್ಟು ಅದಕ್ಕಾಗಿಯೇ ಮೈಮನಗಳ ದುಃಖಕ್ಕೆ ಒಳಗಾಗುತ್ತಾರೆ. ಶ್ರೇಯದಲ್ಲಿ ಪುರುಷಾರ್ಥದ ಸಾರ್ಥಕತೆ ಪಡೆಯುತ್ತಾರೆ.

ಶ್ರೇಯದಲ್ಲಿ ಸಾತ್ವಿಕ ಬುದ್ಧಿಯೇ ತುಂಬಿರುತ್ತದೆ. ಕೊಟ್ಟದ್ದು ತನಗೆ, ಬಚ್ಚಿಟ್ಟದ್ದು ಪರರಿಗೆ - ಇದು ಶ್ರೇಯಸ್ಸು ಮತ್ತು ಪ್ರೇಯಸ್ಸುಗಳ ವಿರುದ್ಧ ಮುಖಗಳು.

ಚತುರ್ವಿಧ ಪುರುಷಾರ್ಥಗಳು - ಧರ್ಮ, ಅರ್ಥ, ಕಾಮ, ಮೋಕ್ಷ. ಪ್ರೇಯದಿಂದ ಅರ್ಥ ಮತ್ತು ಕಾಮಗಳ ಮಹತ್ವಾಕಾಂಕ್ಷೆಯೇ ಹೆಚ್ಚುತ್ತದೆ. ಶ್ರೇಯದಿಂದ ಧರ್ಮ ಮತ್ತು ಮೋಕ್ಷಗಳು ಸಿಗುತ್ತವೆ. ಮೋಕ್ಷ ಎಂಬುದು ಪುರುಷಾರ್ಥದ ಉಪಾಸನೆ. ಶ್ರೇಯದಿಂದಲೇ ಜೀವನ ಕಲ್ಯಾಣವಾಗುತ್ತದೆ.

ಪ್ರೇಯವನ್ನು ಆದಿಶಂಕರಾಚಾರ್ಯರು ಅಜ್ಞಾನ, ದುಃಖ, ಅವಿದ್ಯಾ ಎಂದರು. ಧರ್ಮ ಮತ್ತು ಮೋಕ್ಷಗಳು ಶ್ರೇಯಸ್ಸಿನ ಫಲ. ಅವು ಪುರುಷಾರ್ಥದ ಉಪಾಸನೆಯೆಂದೂ ಪರಿಗಣಿಸಬಹುದು. ಶ್ರೇಯಸ್ಸಿನಿಂದ ಜೀವನ ಸಫಲವಾಗುತ್ತದೆ. ಸಾರ್ಥಕ್ಯಭಾವ ಉಂಟಾಗುತ್ತದೆ. ಶ್ರೇಯದಿಂದ ಆತ್ಮಜ್ಞಾನದ ಬಾಗಿಲುಗಳು ತೆರೆಯುತ್ತವೆ.





# ಪುರುಷಾರ್ಥ

**ಸಾ**ರ್ವಕಾಲಿಕ ಹಾಗೂ ಭಾಷೆ, ದೇಶ, ಮತ, ಧರ್ಮಗಳನ್ನೂ ಮೀರಿದ ಜೀವಂತ ಜೀವನ ಮೌಲ್ಯಗಳು ಯಾವುವು? ಈ ಬಗ್ಗೆ ಭಾರತೀಯ ಋಷಿಗಳು ಸಾವಿರಾರು ವರ್ಷಗಳಿಂದ ತಮ್ಮ ಅಂತಃಸಾಕ್ಷಿಯ ದೃಷ್ಟಿಯಿಂದ, ಜೀವನಾನುಭವದ ವಿವೇಕದಿಂದ ಕಂಡುಕೊಂಡದ್ದೇನು?

ಕಾಲದ ಸತ್ವಪರೀಕ್ಷೆ, ಅಗ್ನಿಪರೀಕ್ಷೆಯಲ್ಲಿ ನಾಲ್ಕು ಮೂಲ ಮೌಲ್ಯಗಳು ವಿರಾಜಮಾನವಾದುವು. ಅವೇ ಚತುರ್ವಿಧ ಪುರುಷಾರ್ಥಗಳು ಎಂದು ನಂಬಿರುವ ಧರ್ಮ, ಅರ್ಥ, ಕಾಮ, ಮೋಕ್ಷ. ಈ ಮೌಲ್ಯಗಳ ಕ್ರಮದಲ್ಲಿ ಒಂದಿಷ್ಟು ಹಿಂದೆ ಮುಂದಾದರೂ, ವಿರುಪೇರಾದರೂ ಜೀವನದ ಸಮತೋಲ ತಪ್ಪಿಹೋಗುತ್ತದೆ. ಅವುಗಳ ಕ್ರಮದಲ್ಲಿ ವ್ಯತ್ಯಯ ಆಗಬಾರದು.

ಜೀವನದ ರೀತಿ, ನೀತಿಗಳ ಸರಿಯಾದ ಅನುಷ್ಠಾನವೇ ಧರ್ಮ. ಅದು ಬದುಕಿನ ಒಂದು ವಿಧಾನ. ಶುದ್ಧ ನೈತಿಕ ಆಚರಣೆಯೇ ಮುಖ್ಯ. ಉಪನಿಷತ್ತಿನ ಕಾಲಕ್ಕೆ ಆಧ್ಯಾತ್ಮಿಕ ತತ್ವಜ್ಞಾನದ ಆಯಾಮದಿಂದ ಧರ್ಮದ ಕಲ್ಪನೆ ಮತ್ತಷ್ಟು ಬೆಳೆಯಿತು. ವಿಸ್ತರಿಸಿತು. ಧರ್ಮದಲ್ಲಿ ಪ್ರವೃತ್ತಿ ಹಾಗೂ ನಿವೃತ್ತಿಯ ವಿಭಾಗಗಳೂ ಉಂಟಾದುವು. ಅರ್ಥ ಮತ್ತು ಕಾಮಗಳೂ ಧರ್ಮಕ್ಕೆ ಪೂರಕ ಮೌಲ್ಯಗಳೇ ಆದುವು. ಬದುಕಿನ ಸಂಪೂರ್ಣ ಮತ್ತು ಆರೋಗ್ಯಕರ ದೃಷ್ಟಿಗೆ ಈ ಚತುರ್ವಿಧ ಪುರುಷಾರ್ಥಗಳು ಅತ್ಯವಶ್ಯ. ಅವುಗಳಲ್ಲಿ ಒಂದಾದರೂ ಸಾಧಿಸದಿದ್ದರೆ ಬದುಕು ವ್ಯರ್ಥ.

ಜೀವನವನ್ನು ಚೆನ್ನಾಗಿ ಬಾಳಬೇಕು. ಆದರ ಸಮತೋಲ

ಕಾಪಾಡಿಕೊಂಡು ಆನಂದವನ್ನು ಅನುಭವಿಸಬೇಕು ಎಂಬುದೇ ಈ ಮೌಲ್ಯಗಳ ಒಟ್ಟು ಸಾರ. ಎಲ್ಲ ಮೌಲ್ಯಗಳೂ ಧರ್ಮದಲ್ಲೇ ಸೇರಿಕೊಂಡಿವೆ. ಜೀವನ ಗೌರವವೇ ಇಲ್ಲಿ ಮುಖ್ಯ. ಈ ಇತ್ಯಾತ್ಮಕ ದೃಷ್ಟಿಯೇ ಜೀವಂತ ಮೌಲ್ಯ.

ಬದುಕಿನಲ್ಲಿ ಅರ್ಥ ಮತ್ತು ಕಾಮ ಅನಿವಾರ್ಯ. ಆದರೆ ಅವೇ ಜೀವನದ ಉದ್ದೇಶಗಳಾಗಬಾರದು. ಅರ್ಥದ ಸದುಪಯೋಗ ಹಾಗೂ ಕಾಮದಲ್ಲಿ ಸಂಯಮ, ನಿಯಂತ್ರಣ ಜೀವನವನ್ನು ಹಸನಾಗಿ ಮಾಡುತ್ತದೆ. ಅವುಗಳ ಸದ್ವಿನಿಯೋಗ ಆಗದಿದ್ದರೆ ಅನರ್ಥವೇ ಪರಿಣಾಮ. ಅರ್ಥ ಮತ್ತು ಕಾಮಗಳು ಅತಿಯಾದರೆ ಜೀವನ ವಿರೋಧಿ ಪ್ರವೃತ್ತಿ ಬೆಳೆಯುವ ಸಾಧ್ಯತೆಗಳಿವೆ.

ಸ್ವಾರ್ಥ ಮತ್ತು ಪರಮಾರ್ಥಗಳ ಸಮತೋಲ, ವ್ಯಕ್ತಿ ಮತ್ತು ಸಮಾಜದ ಸಂಬಂಧಗಳ ಸುವರ್ಣ ಮಾಧ್ಯಮಗಳಾಗಬಹುದು. ಅವುಗಳ ಹೊಂದಾಣಿಕೆಯೇ ಎಚ್ಚರಿಕೆಯಿಂದ ಜೀವನ ನಡೆಸುವ ಆದರ್ಶ. ಇಲ್ಲಿ ವ್ಯಕ್ತಿ ವ್ಯಷ್ಟಿಯಲ್ಲಿ ಕೇಂದ್ರವಾಗಿ, ಸಮಾಜವು ಸಮಷ್ಟಿಯಲ್ಲಿ ಸಾಮೂಹಿಕ ಹಿತದ ದೃಷ್ಟಿಯನ್ನು ಬೆಳೆಸುತ್ತದೆ.

ಈ ಸಾಧನೆಯಲ್ಲಿ ಮೋಕ್ಷವೇ ಗುರಿ. ಈ ಸಂಸಾರ ಚಕ್ರದ ಸುಖ-ದುಃಖಗಳ ಸುಳಿಯಿಂದ ಬಿಡುಗಡೆ. ಈ ಪ್ರಜ್ಞೆಯಿಂದ ಬದುಕು ಬಂಗಾರವಾಗಬಲ್ಲುದು. ಬದುಕನ್ನು ಬಂಗಾರ ಮಾಡಿಕೊಳ್ಳುವ ಅಥವಾ ಬಂಧನ ಮಾಡಿಕೊಳ್ಳುವುದು ನಮ್ಮ ಕೈಯಲ್ಲೇ ಇದೆ.





# ತಿಳಿದುಕೊಳ್ಳಿ - ತಿದ್ದಿಕೊಳ್ಳಿ

ಇಡೀ ಬದುಕು ನಡೆಯುವುದೇ ನಮ್ಮನ್ನು ನಾವು ತಿದ್ದಿಕೊಳ್ಳುವುದರಿಂದ. ಈ ರಿಪೇರಿ ಕೆಲಸ ನಿರಂತರ ನಡೆಯುತ್ತಲೇ ಇರಬೇಕು. ಅದು ದೇಹಕ್ಕೆ ಮತ್ತು ಮನಸ್ಸಿಗೆ ಚಿಕಿತ್ಸೆ. ಆಗಲೇ ಮನುಷ್ಯ ಸ್ಫುಟ ಮಾಡಿದ ಬಂಗಾರದಂತಾಗುತ್ತಾನೆ.

ತಿದ್ದಿಕೊಳ್ಳುವುದು ಎಂದರೆ ಇನ್ನಷ್ಟು, ತಿಳಿದುಕೊಳ್ಳಲು ಪ್ರಯತ್ನ ಪಡುವುದು. ತಿಳಿಯುವುದು ಹಾಗೂ ತಿದ್ದುವುದು ಇವೆರಡೂ ಇಡೀ ಬಾಳಿನ ಎರಡು ಸುವರ್ಣ ರೇಖೆಗಳು.

ನಮ್ಮನ್ನೇ ನಾವು ತಿದ್ದಿಕೊಳ್ಳುವುದು ಎಂದರೆ ಮೂಲ್ಯವರ್ಧಕ ಕರ್ತವ್ಯ. ಕೆಲವು ವಿಷಯಗಳನ್ನು ಗುರು, ಹಿರಿಯರು, ಬಂಧುಗಳು, ಸ್ನೇಹಿತರು ಹೇಳಿ ತಿದ್ದಿಕೊಳ್ಳುತ್ತೇವೆ. ಕೆಲವನ್ನು ಇತರರನ್ನು ನೋಡಿ ತಿದ್ದಿಕೊಳ್ಳುತ್ತೇವೆ. ಇನ್ನು ಕೆಲವು ನಮ್ಮೊಳಗಿನ ಅರಿವು ಜಾಗ್ರತಗೊಂಡು ನಾವೇ ತಿದ್ದುಪಡಿ ಮಾಡಿಕೊಳ್ಳಬೇಕು.

ತಿದ್ದಿಕೊಳ್ಳುವ ಈ ಕ್ರಮಗಳನ್ನೇ ಶಾಸ್ತ್ರಕಾರರು 'ಸಂಸ್ಕಾರ' ಎಂದರು. ಅದು ಬದುಕಿನ ಸಮ್ಯಕ್ ತತ್ತ್ವದ ದರ್ಶನ ಮಾಡಿಸುತ್ತದೆ. ಅದರ ಅರ್ಥ ಇನ್ನಷ್ಟು ಉತ್ತಮ ಪಡಿಸುವುದು, ಶ್ರೇಷ್ಠತ್ವಕ್ಕೆ ಪ್ರಯತ್ನಿಸುವುದು. ಶುದ್ಧ ಮಾಡುವುದು, ಸುಂದರಗೊಳಿಸುವುದು. ನಮ್ಮಲ್ಲಿರುವ ವಿಕೃತಿಗಳನ್ನು ಸರಿಪಡಿಸಿ ನಾವು ಮತ್ತೆ ಪ್ರಕೃತಿಗೆ ಹತ್ತಿರದವರಾಗುವುದು.

ಏನು ತಿದ್ದಿಕೊಳ್ಳುವುದು? ನಮ್ಮ ನಡೆ-ನುಡಿಗಳನ್ನು ಸರಿಪಡಿಸಿಕೊಳ್ಳುವುದು. ಸದ್ಗುಣಗಳ ವಿಕಾಸ ಮಾಡಿಕೊಳ್ಳುವುದು. ಈ

ವಿಕಾಸ ಕೇವಲ ದೈಹಿಕ ಅಥವಾ ಭೌತಿಕವಾದುದಲ್ಲ. ಅದರಿಂದ ಆಂತರಂಗಿಕ ತಿಳಿವಳಿಕೆ, ವಿವೇಕ, ವಿವೇಚನೆಗಳು ಅರಳುತ್ತವೆ. ವಾಸ್ತವವಾಗಿ ಕೆಲಸ ಒಳಗಿನಿಂದಲೇ ಆಗಬೇಕು. ಒಳಗಿನಿಂದ ಹೊರಗಡೆ, ಸರ್ವ ಕಡೆಗಳಲ್ಲೂ ಆವೃತವಾದಾಗಲೇ ಆ ಸಂಸ್ಕಾರಕ್ಕೆ ಕಳೆ ಬರುತ್ತದೆ. ಜೀವನಕ್ಕೆ ಅರ್ಥ ಬರುತ್ತದೆ. ಸಾರ್ಥಕ ಅನುಭವವಾಗುತ್ತದೆ. ಈ 'ಪಾಲಿಶ್' - ಹೊಳಪು - ಜೀವನದ ಬೆಳಕು.

ಇಂದು ಸುತ್ತಲೂ ಕಾಣುತ್ತಿರುವ ಹಲವು ಸಮಸ್ಯೆಗಳಿಗೆ ಒಂದು ಮುಖ್ಯ ಕಾರಣ ನಮ್ಮನ್ನು ನಾವೇ ತಿದ್ದಿಕೊಳ್ಳಲು ಸೋತಿರುವುದು. ತಿದ್ದಿಕೊಳ್ಳುವ ಈ ಪರಿಪಾಠ ನಮ್ಮ ಶಿಕ್ಷಣ ಪದ್ಧತಿಯಲ್ಲಿ ಹಾಸುಹೊಕ್ಕಾಗಬೇಕು. ಮನೆಯ ವಾತಾವರಣದಲ್ಲಿ ಇರಬೇಕು.

ವಿಭಕ್ತ ಕುಟುಂಬದಲ್ಲಿ ತಂದೆ-ತಾಯಿಗಳಿಬ್ಬರೂ ನೌಕರಿಗೆ ಹೋಗುವಾಗ ಮಗುವನ್ನು ಬಾಲವಾಡಿಯಲ್ಲಿ ತುರುಕಿ ಹೋಗುತ್ತಾರೆ. ಅಲ್ಲಿಯೂ ಸಂಸ್ಕಾರ ರಹಿತ ಜನರೇ ಕೇವಲ ವೃತ್ತಿಗಾಗಿ, ನೌಕರಿಗಾಗಿ ಇರುತ್ತಾರೆ. ಮಗುವಿಗೆ ಯಾರು ಕೊಡಬೇಕು ಸಂಸ್ಕಾರವನ್ನು?

ನಮ್ಮ ಹಿಂದಿನ ತಪ್ಪುಗಳನ್ನು ತಿದ್ದಿಕೊಳ್ಳುವುದೇ ಬದುಕಿನ ಏಣಿಯಲ್ಲಿ ಇನ್ನೊಂದು ಮೆಟ್ಟಲು ಮೇಲೆ ಏರಿದಂತೆ. ತಿದ್ದಿಕೊಳ್ಳ ಬೇಕಾದರೂ ಅದಕ್ಕೆ ಒಂದಿಷ್ಟು ಮಾನಸಿಕ ವೈಶಾಲ್ಯ ಬೇಕಾಗುತ್ತದೆ. ಅದು ಬದುಕಿನೊಂದಿಗೆ ರಾಜಿ ಮಾಡಿಕೊಳ್ಳುವುದು ಎಂದು ಬುದ್ಧಿಜೀವಿಗಳು ಗೇಲಿ ಮಾಡುವುದುಂಟು. ಬದುಕು ನಿರಂತರವಾಗಿ ಹೊಂದಾಣಿಕೆಗಳ ಪ್ರವಾಸವೇ ಆಗಿದೆ. ಮಹಾತ್ಮಾ ಗಾಂಧೀಜಿ ಹೇಳಿದಂತೆ 'ಸತ್ಯದೊಂದಿಗೆ ರಾಜಿ' ಮಾಡಿಕೊಳ್ಳುವ 'ಆತ್ಮಸಾಕ್ಷಿ' ನಮಗಿದ್ದರೆ ಸಾಕು.





# ಗುಣದರ್ಶನ

**ಈ** ಬದುಕು, ಇಲ್ಲಿಯ ರೀತಿ-ನೀತಿ, ವ್ಯವಹಾರ, ಸಂಸ್ಕಾರ, ಇವೆಲ್ಲವನ್ನೂ ಪೋಷಿಸುವ ಗುಣವೇ ಜೀವನ ಮನೋಧರ್ಮ. ಅದು ಜೀವನ ದೃಷ್ಟಿ-ಸೃಷ್ಟಿಯಲ್ಲೂ ಸ್ಪಷ್ಟ. ಇವುಗಳನ್ನೆಲ್ಲ ನಮ್ಮ ಪ್ರಾಚೀನ ಶಾಸ್ತ್ರ (ಅಂದರೆ ವಿಜ್ಞಾನ ದೃಷ್ಟಿ), ಸಾಹಿತ್ಯ, ವೇದಾಂತ, ಸಾಂಖ್ಯಗಳಲ್ಲಿ ಸ್ಪಷ್ಟವಾಗಿ ಉಲ್ಲೇಖಿಸಿದ್ದಾರೆ.

ಜಗತ್ತಿನಲ್ಲಿ ಮೂರು ರೀತಿಯ ಗುಣಗಳಿವೆ ಎಂದು ಸಾಂಖ್ಯ ಶಾಸ್ತ್ರ ಹೇಳುತ್ತದೆ. ಅಂದರೆ ಎಲ್ಲ ಜನರನ್ನು ಸ್ಥೂಲವಾಗಿ ಮೂರು ಗುಣಗಳಲ್ಲಿ ವಿಭಾಗಿಸಬಹುದು. ಈ ಬಗ್ಗೆ ಭಗವದ್ಗೀತೆಯಲ್ಲೂ ಸಾಕಷ್ಟು ವಿವರಗಳಿವೆ. ಈ ಗುಣಗಳೆಲ್ಲ ಪ್ರಕೃತಿ ಜನ್ಯವಾಗಿ ಅವುಗಳಂತೆ ಸ್ವಭಾವ ರೂಪುಗೊಳ್ಳುತ್ತದೆ.

ಸತ್ವ, ರಜ, ತಮ - ಇವೇ ಈ ಮೂರು ಗುಣಗಳು. ಈ ಗುಣಗಳಾದರೂ ಪ್ರಕೃತಿ ಕೊಟ್ಟದ್ದೇ. ಅವುಗಳ ಹೊಂದಾಣಿಕೆ, ಮಿಶ್ರಣಗಳಿಂದ ಮನುಷ್ಯ ಸ್ವಭಾವ ಉಂಟಾಗುತ್ತದೆ. ಲೌಕಿಕವಾಗಿ ಇರುವುದೆಲ್ಲ ಈ ತ್ರಿಗುಣಗಳಿಂದಲೇ ಕೂಡಿದೆ. ಯಾವುದೋ ಒಂದು ಗುಣ ಮುಖ್ಯವಾಗಿ ಉಳಿದವು ಕಡಿಮೆ ಇರುತ್ತವೆ. ಮನುಷ್ಯನ ಇಡೀ ಜೀವನ ಈ ಗುಣಗಳನ್ನೇ ಹೊಂದಿಕೊಂಡಿದೆ. ಅವನ ನಡೆ, ನುಡಿ, ಕೆಲಸ ಎಲ್ಲವೂ ಈ ಗುಣಗಳಿಂದ ನಿರ್ದೇಶಿತವಾಗುತ್ತವೆ. ಸಮರಸ, ಸರಸ, ವಿರಸಗಳೆಲ್ಲವುಗಳಿಗೂ ಈ ಗುಣಗಳೇ ಕಾರಣ. ಇವುಗಳ ಹೊಂದಾಣಿಕೆ ಮುಖ್ಯ.

ಈ ಗುಣಕರ್ಮಗಳಿಂದಲೇ ವರ್ಣಾಶ್ರಮ ಹುಟ್ಟಿತು. ಕ್ರಮೇಣ ಅದರ ಕೆಡುಕಿನ ಫಲವೇ ಜಾತಿ ಪದ್ಧತಿಯಾಗಿ ಒಡೆಯಿತು.

ಸತ್ವಗುಣ ಜ್ಞಾನಪ್ರಕಾಶದಿಂದ ಕೂಡಿರುತ್ತದೆ. ಸಾತ್ವಿಕ ಗುಣದವರ ಸ್ನೇಹ ನೆಮ್ಮದಿ, ಶಾಂತಿಯಿಂದ ತುಂಬಿರುತ್ತದೆ. ಅವರೆಂದೂ ಇನ್ನೊಬ್ಬರಿಗೆ ಹಿಂಸೆ ಕೊಡಲಾರರು. ಕೆಡಕು ಮಾಡಲಾರರು. ಕೆಟ್ಟದ್ದನ್ನು

ಯೋಚಿಸಲಾರರು. ರಜೋಗುಣ ಪ್ರೀತಿಸ್ವರೂಪದ್ದು. ವಾತ್ಸಲ್ಯ, ಆತ್ಮೀಯ ಸ್ವಭಾವಗಳಿಂದ ಇವರು ಜೀವನವನ್ನು ತುಂಬ ಪ್ರೀತಿಸುತ್ತಾರೆ. ಜೀವನ ಸೌಂದರ್ಯವನ್ನು ಚೆನ್ನಾಗಿ ಹೀರಬೇಕೆಂಬ ಉತ್ಕಟ ಆಸೆಯ ರಸಿಕತನವೂ ರಜೋಗುಣದಲ್ಲಿದೆ.

ತಮೋಗುಣ ಮನಸ್ಸನ್ನು ಕತ್ತಲೆಯಲ್ಲಿಡುತ್ತದೆ. ಮಂದಮತಿಯ ಗುಣವಿದು. ಆಲಸ್ಯ, ಅನಾದರ, ಕೋಪ, ಮಾತ್ಸರ್ಯ, ಆಕ್ರಮಣ ಇವೆಲ್ಲ ತಮೋಗುಣದ ಮುಖ್ಯ ಲಕ್ಷಣಗಳು, ನೈತಿಕ ಮೌಲ್ಯಗಳ ಬಗ್ಗೆ ತಾತ್ಸಾರ, ಸ್ವಾರ್ಥ ತಮೋಗುಣದಲ್ಲಿ ಪ್ರಧಾನ.

ಪ್ರತಿಯೊಬ್ಬ ವ್ಯಕ್ತಿಯೂ ಈ ಮೂರೂ ಗುಣಗಳ ಮಿಶ್ರಣ. ಯಾವುದು ಹೆಚ್ಚು, ಯಾವುದು ಕಡಿಮೆ? ನಮ್ಮನ್ನೇ ನಾವು ತೂಗಿ ನೋಡಬೇಕು. ದೇಶ, ಕಾಲ, ಪರಿಸ್ಥಿತಿಗೆ ಇದರ ಬದಲಾವಣೆ. ನಾವು ತಿನ್ನುವ ಆಹಾರ, ನಮ್ಮ ಸಂಘ ಜೀವನ, ನಮ್ಮ ವಿಚಾರಗಳು ಇವುಗಳಿಗೂ ನಮ್ಮ ಗುಣಗಳಿಗೂ ಹತ್ತಿರದ ನಂಟು. ಸಾತ್ವಿಕ ಆಹಾರ ಸೇವನೆ ಅದೇ ಭಾವನೆಗಳನ್ನು ಅರಳಿಸುತ್ತದೆ. ಕುಡಿತ, ಜೂಜು, ಕ್ರೌರ್ಯ, ಕಾಮುಕತನ ಇವು ವಿಷಯಾಸಕ್ತಿಯಿಂದ ಕೂಡಿ ತಮೋಗುಣವನ್ನು ಕೆರಳಿಸುತ್ತವೆ.

ಸತ್ವಗುಣ ಸುಖಾತ್ಮಕವಾಗಿರುತ್ತದೆ. ರಜೋಗುಣ ದುಃಖಾತ್ಮಕ. ತಮೋಗುಣ ವಿಷಾದಾತ್ಮಕ. ಸತ್ವಗುಣ ಊರ್ಧ್ವಗಾಮಿ, ಪ್ರಕಾಶಮಾನ, ಅಧ್ಯಾತ್ಮಚಿಂತನದೆಡೆಗೆ ಹೋಗಲು ಆಸೆ ಪಡುತ್ತದೆ. ರಜೋಗುಣ ಪ್ರೇರಕ, ಲೌಕಿಕ ಹಾಗೂ ಪ್ರಚೋದಕ. ಅದು ಪ್ರಾಪಂಚಿಕ ಖುಷಿಯಲ್ಲೇ ಸುಖ ಪಡಲು ಪ್ರಯತ್ನಿಸುತ್ತದೆ. ತಮೋಗುಣ ಜಡ, ಕಠೋರ. ಅದು ತನ್ನ ಸುತ್ತಲೂ ಗೋಡೆ ಕಟ್ಟಿಕೊಳ್ಳುತ್ತದೆ. ಅಲ್ಲಿ ಬೇರೆ ಬೇರೆ ವಿಚಾರಗಳು ಬರದಂತೆ ತಡೆಯುತ್ತದೆ. ತಾನು ಹೇಳಿದ್ದೇ ಸರಿ - ಇದಮಿತ್ಥಂ ಎಂದು ಹಟಮಾಡುತ್ತಾರೆ.

ತ್ರಿಗುಣಾತೀತರಾದವರು ದೈವಿಕಭಾವ ಪಡೆಯುತ್ತಾರೆ. ಈ ತ್ರಿಗುಣಗಳನ್ನು ದಾಟುವುದೇ ಮೋಕ್ಷದಾಯಕ.

ಗುರುವನ್ನು ತ್ರಿಗುಣಾತೀತ ಎಂದು ನಾವು ಸ್ತುತಿಸುವುದು ಈ ಹಿನ್ನೆಲೆಯಲ್ಲಿಯೆ.



# ಆಪತ್ತು

**ಬ**ದುಕಿನಲ್ಲಿ ಆಪತ್ತುಗಳು ಯಾರಿಗೆ ತಾನೆ ಬರುವುದಿಲ್ಲ? ಅವು ನಮ್ಮ ಸತ್ವಪರೀಕ್ಷೆ ಮಾಡುತ್ತವೆ. ನಮ್ಮನ್ನು ತಿದ್ದುತ್ತವೆ. ಜೀವನದ ಅನುಭವವನ್ನು ವಿಸ್ತರಿಸುತ್ತವೆ.

'ಕಾದಂಬರಿ' ಬರೆದ ಬಾಣಭಟ್ಟನು 'ಅತ್ಯಂತ ನಿಬಿಡವಾದ ಕಾಡನ್ನು ಪ್ರವೇಶಿಸಿದವರಿಗೆ ಕಷ್ಟಗಳು ಬಂದೇ ಬರುತ್ತವೆ' ಎನ್ನುತ್ತಾನೆ. ಕಾಡಿನಲ್ಲಿ ದಾರಿ ತಪ್ಪುವುದು ಸಹಜ. ಈ ಜೀವನವೇ ಒಂದು ಕಾಡು ಅಲ್ಲವೆ?

ಆಪತ್ತಿನಿಂದ ನಮ್ಮನ್ನು ನಾವು ರಕ್ಷಿಸಿಕೊಳ್ಳುವುದು ಧರ್ಮ. ಅಂಥ ಸಂದರ್ಭದಲ್ಲಿ ಪ್ರಾಜ್ಞರು, ಲೋಕಾನುಭವ ಇರುವವರು ನಿರಾಶರಾಗುವುದಿಲ್ಲ. ಅವರ ಉತ್ಸಾಹ ಕುಂದುವುದೂ ಇಲ್ಲ. ಇದಕ್ಕೆ ಅವರ ಮನೋ ನಿಗ್ರಹವೇ ಮುಖ್ಯ ಕಾರಣ.

ಅನೇಕ ವೇಳೆ ಆಪತ್ತು, ವಿಪತ್ತು ವರದಾನವಾಗಿ ಪರಿಣಮಿಸುತ್ತದೆ. ಇಂಗ್ಲಿಷ್‌ನಲ್ಲಿ 'ಬ್ಲೆಸ್ಸಿಂಗ್ ಇನ್ ಡಿಸ್‌ಗೈಸ್' ಎನ್ನುತ್ತಾರಲ್ಲ, ಹಾಗೆ. ಮಹಾತ್ಮರು ಇನ್ನಷ್ಟು ಔದಾರ್ಯವನ್ನೇ ತೋರಿಸುತ್ತಾರೆ. ಧೂಪವು ಬೆಂಕಿಯಲ್ಲಿ ಬಿದ್ದಾಗಲೂ ಪರಿಮಳ ಸೂಸುತ್ತದೆ.

ದೈವವು ಮನುಷ್ಯನನ್ನು ಹಲವು ರೀತಿಗಳಲ್ಲಿ ಸತ್ವಪರೀಕ್ಷೆಗೆ ಒಳಪಡಿಸುತ್ತದೆ. ಸಮಸ್ಯೆಗಳು ಬರುತ್ತವೆ. ಸಂಕಷ್ಟಗಳು ಬರುತ್ತವೆ. ಅವುಗಳ ಜಂಜಾಟದಲ್ಲಿ ದಿಗ್ಮೂಢರಾಗುತ್ತೇವೆ.

ಕಷ್ಟಕಾಲದಲ್ಲಿ ನಮ್ಮ ನಿಜವಾದ ಮಿತ್ರರು ಯಾರು ಎಂದು ತಿಳಿಯುತ್ತದೆ. ಯುದ್ಧದಲ್ಲಿ ಮಾತ್ರ ವೀರನ ಯೋಗ್ಯತೆ ಗೊತ್ತಾಗುತ್ತದೆ. ಹೆಂಡತಿಯ ಗುಣ ಬಡತನದಲ್ಲಿ ಅರಿವಾಗುತ್ತದೆ. ಬಂಧುಬಳಗದವರ ಹಣೆಯ ಬರಹವೂ ತಿಳಿದುಬಿಡುತ್ತದೆ.

ಆಪತ್ಕಾಲವನ್ನು ಹೇಗೆ ಎದುರಿಸಬೇಕು? ಮಹಾಭಾರತದಲ್ಲಿ ಧರ್ಮರಾಜನು ಶ್ರೀಕೃಷ್ಣನಲ್ಲಿ ಬೇಡಿಕೊಳ್ಳುತ್ತಾನೆ. ''ನಮಗೆ ಯಾವಾಗಲೂ ಆಪತ್ತುಗಳಿರಲಿ, ಆಗ ಶ್ರೀಹರಿಯ ನಾಮಸ್ಮರಣೆಯನ್ನು ನಿರಂತರ ಮಾಡುವಂತಾಗುತ್ತದೆ'' ಎನ್ನುತ್ತಾನೆ.

ಕಥಾಸರಿತ್ಸಾಗರದಲ್ಲಿ ಒಂದು ಮಾತು ಬರುತ್ತದೆ - 'ಆಪತ್ಸು ಧೀರಾನ್ ಪುರುಷಾನ್ ಸ್ವಯಮಾಯಾಂತಿ ಸಂಪದಃ'.

(ಆಪತ್ಕಾಲದಲ್ಲೂ ಧೈರ್ಯವುಳ್ಳ ಜನರಿಗೆ ಐಶ್ವರ್ಯಗಳು ತಾವಾಗಿಯೇ ಲಭಿಸುತ್ತವೆ)

ಪುರಂದರದಾಸರೂ ಹಾಡಿದ್ದಾರೆ -

*ಹರಿಯೆಂದು ಮನದಲಿ ಮರೆದೊಮ್ಮೆ ನೆನೆದರೆ*
*ದುರಿತ ಪರ್ವತಗಳ ಖಂಡಿಪುದು ವಜ್ರದಂತೆ*

ಆಪತ್ತುಗಳಂತೂ ಬಂದೇ ಬರುತ್ತವೆ. ಕೆಲವು ಸ್ವಯಂಕೃತ ಅಪರಾಧಗಳು. ಇನ್ನು ಕೆಲವು ಸನ್ನಿವೇಶಪೂರ್ವ ವಿಚಿತ್ರ ಸುಳಿಯಲ್ಲಿ ಸೆಳೆದೊಯ್ಯುತ್ತವೆ. ಆಗ ನಾವು ಹತಾಶರಾಗಬೇಕಿಲ್ಲ. ಅವುಗಳಿಂದ ತಪ್ಪಿಸಿಕೊಳ್ಳುವುದಲ್ಲ. ಅವನ್ನು ಧೈರ್ಯದಿಂದ ಎದುರಿಸುವುದೇ ಜಾಣತನ.

ಆಮೇಲೆ ಪುರಂದರದಾಸರು ಹಾಡಿದಂತೆ ಆದದ್ದೆಲ್ಲ ಒಳಿತೇ ಆಯಿತು ಎಂದು ನಕ್ಕು ಬಿಡುವುದಿಲ್ಲವೆ? ಬೆಟ್ಟದಂತೆ ಬಂದದ್ದು ಬೆಣ್ಣೆಯಂತೆ ಕರಗಿ ಹೋಗುತ್ತದೆ. ಮನಸ್ಸಿನ ಸ್ಥೈರ್ಯವೊಂದೇ ಆಗ ರಕ್ಷಣೆ.

ನಗುವರಲ್ಲೋ ರಂಗಯ್ಯ ನಿನ್ನಾಟವ ಕಂಡು ಎಂದು ಪುರಂದರದಾಸರು ಹಾಡಿದಂತೆ, ನಾವೂ ಹಳೆಯ, ದಾಟಿ ಬಂದ ಕಷ್ಟದ ದಿನಗಳನ್ನು ನಗುತ್ತ ನೆನೆಯುವುದಿಲ್ಲವೆ?



# ಯಮ

**ಮ**ರಣವೇ ಯಮ ಎಂಬುದು ನಮ್ಮ ನಂಬಿಕೆ. ಋಗ್ವೇದದಲ್ಲಿ 'ತಸ್ಮೈ ಯಮಾಯ ನಮೋ ಅಸ್ತು ಮೃತ್ಯವೇ' ಎಂದಿದೆ. ನಮ್ಮ ಪುರಾಣ ಕತೆಗಳಲ್ಲೂ ಯಮನೆಂದರೆ ಕಾಲಾಂತಕನೆ.

ಇಲ್ಲಿ ಹೇಳಲು ಹೊರಟಿರುವುದು ಬದುಕಿನ ಯಮನ ಕತೆ. ಬದುಕಿನ ಸಾರ್ಥಕ್ಯಕ್ಕೆ ಯಮನ ಐದು ಮೌಲ್ಯಗಳ ಆವಶ್ಯಕತೆ ಇದೆ. ಈ ಐದು ಮೌಲ್ಯಗಳನ್ನು ಋಷಿ ಪತಂಜಲಿ ತನ್ನ ಯೋಗಸೂತ್ರದಲ್ಲಿ ಹೇಳಿದ್ದಾನೆ. ಅವನ್ನು ಅನುಷ್ಠಾನಕ್ಕೆ ತಂದುಕೊಂಡರೆ ರಾಜಯೋಗ ಪ್ರಾಪ್ತಿ. ಜೀವನಕ್ಕೆ ವಿಶ್ವವ್ಯಾಪ್ತಿ.



ಅಹಿಂಸೆ, ಸತ್ಯ, ಆಸ್ತೇಯ, ಬ್ರಹ್ಮಚರ್ಯ, ಅಪರಿಗ್ರಹ ಇವೇ ಈ ಪಂಚಮೌಲ್ಯಗಳು. ಮಹಾತ್ಮಾ ಗಾಂಧೀಜಿ ಇವನ್ನೇ ಆಚರಿಸಿದರು.

ಅಹಿಂಸೆ-ಶಾರೀರಿಕ, ಮಾನಸಿಕ ಹಾಗೂ ಬೌದ್ಧಿಕ. ಅಹಿಂಸೆಯ ಪಾಲನೆ ಇದೇ ಶ್ರೇಷ್ಠ ಧರ್ಮ. ಅಂದರೆ ಮನ, ವಾಕ್, ಕರ್ಮ ಈ ತ್ರಯೀಗುಣಗಳೇ ಹಿತಕಾರಕ. ಯಾವ ಕಾರಣಕ್ಕೂ ಮತ್ಸರ ಮಾಡಬಾರದು. ಮಾತಿನಿಂದ ನೋಯಿಸಬಾರದು. ಮನಸ್ಸಿನಲ್ಲಿ ಇನ್ನೊಬ್ಬರಿಗೆ ಕೆಡುಕು ಮಾಡಬಾರದೆನ್ನುವ ವಿಚಾರಕ್ಕೆ ತಡೆ ಹಾಕುವುದು ಶ್ರೇಷ್ಠ ಮಾನವರಿಗೆ ಮಾತ್ರ ಸಾಧ್ಯ. ದ್ವೇಷ ಮತ್ತು ಕೋಪಗಳು ಹತ್ತಿರವೂ ಸುಳಿಯದಂತೆ ಪ್ರಯತ್ನ.

ಸತ್ಯ-ಸಾಧಕನಿಗೆ ಇದು ಇಂದ್ರಿಯಾತೀತ ಆತ್ಮಜ್ಞಾನ ಕೊಡುತ್ತದೆ. ಸತ್ಯಪರಿಪಾಲನೆ ನಿಜಕ್ಕೂ ಕಠಿಣ ವ್ರತ. ಸತ್ಯವೇ ದೇವರು, ದೇವರೇ ಸತ್ಯ.

ಆಸ್ತೇಯ - ಕಾಯಾ, ವಾಚಾ, ಮನಸಾ, ನಿಸ್ಪೃಹತೆ, ಇನ್ನೊಬ್ಬರ ವಸ್ತುವಿಗೆ ಆಸೆ ಪಡದೆ ಇರುವ ಗುಣ. ಇನ್ನೊಬ್ಬರ ವಸ್ತು ತನಗೆ ಬೇಕು ಎಂಬ ಆಸೆಯೇ ಕಳ್ಳತನ. ತನ್ನ ಪ್ರಾಮಾಣಿಕ ಗುಣಗಳಿಂದ, ಪರಿಶ್ರಮದಿಂದ ಗಳಿಸಿದ್ದನ್ನು ಸದ್ವಿನಿಯೋಗ ಮಾಡಿ ಸಂತೋಷ ಪಡುವುದು, ಆಸ್ತೇಯದ ಮುಖ್ಯ ಲಕ್ಷಣ.

ಬ್ರಹ್ಮಚರ್ಯ-ವಿಷಯಾಸಕ್ತಿಯಿಂದ ದೂರ ಇರುವುದೇ ಬ್ರಹ್ಮಚರ್ಯ. ವಿವಾಹ ಮಾಡಿಕೊಳ್ಳದೇ ಇರುವುದು ಎಂದಾಕ್ಷಣ ಅದು ಬ್ರಹ್ಮಚರ್ಯ ಆಗುವುದಿಲ್ಲ. ಪ್ರಬಲವಾದ ಕಾಮ ' ವಾಸನೆಯನ್ನು ನಿಯಂತ್ರಿಸಿಕೊಳ್ಳುವುದು ಮುಖ್ಯ. ಪ್ರಸಿದ್ಧ ಯೋಗಾಚಾರ್ಯ ಬಿ.ಕೆ.ಎಸ್.ಅಯ್ಯಂಗಾರರು ಹೇಳುತ್ತಾರೆ. ''ನನಗೆ ಆರು ಮಕ್ಕಳಿದ್ದಾರೆ. ಆದರೆ ನಾನು ಬ್ರಹ್ಮಚರ್ಯವ್ರತ ಪಾಲನೆ ಮಾಡುತ್ತೇನೆ. ಏಕಪತ್ನೀವ್ರತಸ್ಥನಾಗಿ ಭೋಗಲಾಲಸೆ ಇಲ್ಲದೆ ಇರುವುದು ಬ್ರಹ್ಮಚರ್ಯ'' ಮಾನಸಿಕ ಶುದ್ಧಿ ಅತ್ಯಂತ ಮುಖ್ಯ.

ಅಪರಿಗ್ರಹ-ಸರಳ ಬದುಕಿನ ಸೂತ್ರ, ನಮಗೆಷ್ಟು ಬೇಕೋ ಅಷ್ಟೇ ಸಾಕು ಎಂಬ ಮಿತಿ. ಅನವಶ್ಯಕ ಸಂಗ್ರಹ ಮಾಡುವ ಲೋಭದಿಂದ ಮುಕ್ತಿ. ವಸ್ತು ಸಂಗ್ರಹದಿಂದ ಆಸಕ್ತಿ, ಲೋಭ, ಕಳ್ಳತನ, ಅಭಿಲಾಶೆ ಹೆಚ್ಚುತ್ತವೆ.

ಒಟ್ಟಿನಲ್ಲಿ 'ಯಮ' ನ ಈ ಐದು ತತ್ವಗಳು ಜೀವನ ಸಂಯಮ, ಜೀವನ ನಿಯಮಗಳು, ಅವುಗಳ ಕಟ್ಟುನಿಟ್ಟಿನ ಪಾಲನೆಯಿಂದ ಬಾಳು ಸಾರ್ಥಕ. ಯಮ ಎಂಬುದು ಜೀವನ ವೃಕ್ಷದ ಮೂಲ ಬೀಜ. ಸಾವಿನ ಯಮನಿಗಿಂತ ಬದುಕಿನ ಯಮನೇ ನಮಗೆ ಮುಖ್ಯ, ಅಲ್ಲವೆ?



# ಆಸೆ

ಮನುಷ್ಯನ ಆಸೆಗಳಿಗೆ ಮಿತಿಯುಂಟೆ? 'ಪಂಚತಂತ್ರ'ದಲ್ಲಿ ಒಂದು ಮಾತು ಬರುತ್ತದೆ -

*ಇಚ್ಛತಿ ಶತೀ ಸಹಸ್ರಂ ಸಹಸ್ರೀ ಲಕ್ಷಮೀಹತೇ*

(ನೂರುಳ್ಳವನು ಸಾವಿರವನ್ನು ಬಯಸುತ್ತಾನೆ. ಸಾವಿರವುಳ್ಳವನು ಲಕ್ಷವನ್ನು ಆಶಿಸುತ್ತಾನೆ)

ಆಸೆ ಮನುಷ್ಯ ಸಹಜ. ಅತ್ಯಾಸೆ, ಅತಿ ಮಹತ್ವಾಕಾಂಕ್ಷೆ ಅವನ ಮಾನವೀಯ ಗುಣಗಳಿಗೆ ಮಾರಕ. ಅತಿ ಆಸೆ ಹಲವು ರೀತಿಗಳಲ್ಲಿ ಬೆಳೆಯುತ್ತದೆ. ಒಂದಕ್ಕೊಂದು ಕೊಂಡಿಯಂತಾಗಿ ದುರ್ಮಾರ್ಗಕ್ಕೆ ಪ್ರವರ್ತಿಸುತ್ತದೆ. ಅದರ ದೋಷಗಳಿಗೆ ಲೆಕ್ಕವಿಲ್ಲ. ಕೆಡುಕುಗಳಿಗೆ ಕೊನೆಯಿಲ್ಲ.

ಆಸೆ ಹೆಚ್ಚಾದಂತೆ ಮನುಷ್ಯನು ದುರ್ಬಲನಾಗುತ್ತಾನೆ. ತಪ್ಪು ದಾರಿ ಹಿಡಿಯಲು ಉತ್ಸಾಹಿತನಾಗುತ್ತಾನೆ. ತನ್ನ ಆಸೆಯ ಗುರಿ ಮುಟ್ಟಲು ಅವನೇನು ಮಾಡಲೂ ಹೇಸುವುದಿಲ್ಲ.

ಮಹಾಭಾರತದಲ್ಲಿ ಒಂದು ಮಾರ್ಮಿಕ ಮಾತಿದೆ -

*ತೃಣೀಕರೋತಿ ತೃಷ್ಣೈಕಾ ನಿಮಿಷೇಣ ನರೋತ್ತಮಾನ್*

(ಆಸೆಯೊಂದೇ ನಿಮಿಷ ಮಾತ್ರದಲ್ಲಿ ಎಂಥ ಶ್ರೇಷ್ಠ ಮಾನವನನ್ನೂ ಹುಲ್ಲುಕಡ್ಡಿಯಂತೆ ಮಾಡಿ ಬಿಡುತ್ತದೆ)

ಆಸೆ ಎಂಬುದು ದೇವ ದೇವತೆಗಳನ್ನೂ ಬಿಟ್ಟಿದ್ದಲ್ಲ. ತಮಾಷೆಯ

ಉದಾಹರಣೆಯಾಗಿ ಹೇಳುವುದುಂಟು - ಹೇ ಆಶಾ ದೇವಿಯೇ ನಿನಗೆ ನಮಸ್ಕಾರ. ವಿಷ್ಣುವು ಮೂರು ಲೋಕಕ್ಕೆ ಒಡೆಯನಾದರೂ ನಿನ್ನ ಹಿಂದೆ ಬಿದ್ದು ವಾಮನನಾದ ! ಹುಲು ಮಾನವನ ಗತಿಯೇನು?

ಜೀವನದಲ್ಲಿ ಲೋಪ, ಕುಂದು, ಕೊರತೆ ಇರುವವರಿಗೆ ಆಸೆ ಇನ್ನೂ ಹೆಚ್ಚು. ಆಶೆಯಿಂದ ಮನುಷ್ಯನು ಕುರುಡನೇ ಆಗುತ್ತಾನೆ. ರೋಗಿ, ಮಕ್ಕಳಿಲ್ಲದವರು ಹಾಗೂ ಮುದುಕರಿಗೆ ಆಸೆ ಹೆಚ್ಚಾಗುತ್ತದೆ. ಆಸೆಗೆ ಬಡವ, ಬಲ್ಲಿದ ಎಂಬ ಭೇದವೇ ಇಲ್ಲ.

ಆಸೆಯಿಂದ ಶ್ರೀಮಂತ ಬಡವನಾಗುತ್ತಾನೆ. ಆಸೆ ಇಲ್ಲದ ಬಡವ ಶ್ರೀಮಂತನಂತಿರುತ್ತಾನೆ. ಆಸೆಯೆಂಬ ಮನೋ ವ್ಯಾಪಾರ ಮನುಷ್ಯನ ಎಲ್ಲ ದುಃಖಗಳಿಗೂ ಮೂಲ ಕಾರಣ (ಆಶಾ ದುಃಖಸ್ಯ ಕಾರಣಂ) ಆಸೆ ಒಂದು ಮನೋರೋಗ.

ಆಸೆಯಿಂದ ಭರವಸೆ. ಆದರಿಂದ ಜೀವನದಲ್ಲಿ ಹುರುಪು. ಯಾರು ಆಸೆಗೆ ಅಡಿಯಾಳೋ ಅವರು ಎಲ್ಲರಿಗೂ ಅಡಿಯಾಳು. ಆದರೆ ಯಾರಿಗೆ ಆಸೆ ಗುಲಾಮನಂತಿರುತ್ತದೆಯೋ ಅವರಿಗೆ ಲೋಕವೇ ದಾಸನಾಗುತ್ತದೆ.

ಆಸೆಗಳ ನಿಯಂತ್ರಣವೇ ಬದುಕಿನ ಶಿಸ್ತು. ಬಲಶಾಲಿಯಾದ ಆಸೆಗಳು ಬಂದು ಆಕ್ರಮಣ ಮಾಡುವಾಗ ವಿವೇಕ, ವಿವೇಚನೆಗಳು ಅವನ್ನು ತಡೆಯಬೇಕು. ಅದೇ ಬದುಕಿನ ಸಾಧನೆ.

ಇಚ್ಛಾನಿರೋಧಃ ತಪಃ

(ಇಚ್ಛೆಗಳ ನಿರೋಧವೇ ತಪಸ್ಸು)

ಮನಸ್ಸಿಗೆ ಎಲ್ಲಿ ಬ್ರೇಕ್ ಹಾಕಬೇಕು, ಎಲ್ಲಿ ಎಕ್ಸಿಲೇಟರ್ ಒತ್ತಬೇಕು ಎಂಬ ತರಬೇತಿ ಕೊಡುವುದೇ ಒಳ್ಳೆಯ ಡ್ರೈವಿಂಗ್. ಜೀವನದ ಮುಖ್ಯ ಸಾಹಸ. ಅದರಲ್ಲೇ ಮನುಷ್ಯನ ಸತ್ವಪರೀಕ್ಷೆ.



# ಆಲಸ್ಯ

ಬದುಕಿದಾಗ ಮನುಷ್ಯನಿಗೆ ಯಾವುದು ಮಹಾ ಶತ್ರು? 'ಆಲಸ್ಯಂ ಹಿ ಮನುಷ್ಯಾಣಾಂ ಶರೀರಸ್ಥೋ ಮಹಾನ್ ರಿಪುಃ' ಎಂದು ಭರ್ತೃಹರಿಯು ತನ್ನ 'ನೀತಿಶತಕ' ದಲ್ಲಿ ಹೇಳಿದ ಮಾತು ನೂರಕ್ಕೆ ನೂರು ಸತ್ಯ.

ಮುಂದುವರಿದು ಭರ್ತೃಹರಿ ಹೇಳುತ್ತಾನೆ - 'ನಾಸ್ತ್ಯುದ್ಯಮಸಮೋ ಬಂಧುಃ ಕೃತ್ವಾ ಯಂ ನಾವಸೀದತಿ' ಸೋಮಾರಿತನವು ಮನುಷ್ಯನ ಶರೀರದಲ್ಲಿ ನೆಲಸಿದ ಮಹಾಶತ್ರು. ಆದರೆ ಉದ್ಯೋಗದಂಥ ಬಂಧು ಬೇರಿಲ್ಲ. ಉದ್ಯೋಗ ಮಾಡಿದವರು ದುಃಖಿಸಬೇಕಿಲ್ಲ.

ಆಲಸ್ಯಕ್ಕೆ ಕನ್ನಡದಲ್ಲಿ ಒಂದು ಮಾರ್ಮಿಕ ಪದವಿದೆ. ಮೈಗಳ್ಳ ಎಂಬ ಈ ಶಬ್ದ ಎಷ್ಟು ಅರ್ಥಪೂರ್ಣ! ಸೋಮಾರಿಯಾದವನು ಮಹಾಕಳ್ಳ.. ಅವನು ಅತ್ಯಮೂಲ್ಯ ಸಮಯವನ್ನು ಕದಿಯುತ್ತಾನೆ. ಕೆಲಸವನ್ನು ಮಾಡುವ ಅವಕಾಶ ಕದಿಯುತ್ತಾನೆ. ತನ್ನ ಕರ್ತವ್ಯಲೋಪ ಮಾಡುತ್ತಾನೆ. ಮೈಗಳ್ಳತನ ಅತ್ಯಂತ ಘೋರ ಅಪರಾಧವೇ ಸರಿ.

ಮೈಗಳ್ಳ ಬದುಕಿದ್ದೂ ಸತ್ತಂತೆ. 'ಆಲಸ್ಯಂ ಜೀವತೋ ಮೃತಿಃ' ಎಂಬುದನ್ನು ನಾವು ಪ್ರತ್ಯಕ್ಷ ಕಾಣುತ್ತೇವೆ. ನಮ್ಮ ದೇಶದಲ್ಲಿ ಹೆಜ್ಜೆ ಹೆಜ್ಜೆಗೆ ಇಂಥ ಉದಾಹರಣೆಗಳು ಹೇರಳ ಸಿಗುತ್ತಿವೆ.

ಆಲಸ್ಯ ಪ್ರಗತಿ, ಅಭಿವೃದ್ಧಿಗಳ ಮಹಾಶತ್ರು. ಆರೋಗ್ಯ, ಆತ್ಮವಿಶ್ವಾಸ, ಆನಂದ ಎಲ್ಲವೂ ನಾಶವಾಗುತ್ತವೆ. ಉನ್ನತಿಗೆ ಅದು ಅಡ್ಡಕಾಲು. ವಿದ್ಯೆ ಹಾಳಾಗುತ್ತದೆ. ಬುದ್ಧಿಗೆ ತುಕ್ಕು ಹಿಡಿಯುತ್ತದೆ. ಕೃತುಶಕ್ತಿ

ಕರಗಿ ಬಿಡುತ್ತದೆ. ಸಂಕಲ್ಪಶಕ್ತಿ ಬರುವುದೇ ಇಲ್ಲ. ಮೈಗಳ್ಳತನ ಮನುಷ್ಯನನ್ನು ಕೊಲ್ಲುತ್ತದೆ.

ಸೋಮಾರಿತನ ಬಲು ಜಡ. ಅದು ಕಲ್ಲು ಬಂಡೆಯಂತೆ, ಅದಕ್ಕೆ ಸ್ಪಂದನವಿಲ್ಲ. ಬರೀ ದೇಹವಲ್ಲ. ಮನಸ್ಸೇ ಜಡವಾಗಿರುತ್ತದೆ.

ಆಲಸ್ಯ ತುಂಬಿರುವ ಮನೆ, ಮನ ದೊಡ್ಡ ಕಸದ ಬುಟ್ಟಿಯಾಗುತ್ತದೆ. ಅಲ್ಲಿ ಒಳ್ಳೆಯ ಇತ್ಯಾತ್ಮಕವಾದ ವಿಚಾರವೇ ಸುಳಿಯುವುದಿಲ್ಲ. ಕತ್ತಲೆ ಕವಿದಿರುತ್ತದೆ. ಮುಂದಿನ ದಾರಿ ಕಾಣುವುದಿಲ್ಲ. ಅಂಥ ಬದುಕಿಗೆ ಯಾವ ಅರ್ಥವೂ ಇಲ್ಲ.

ಆಲಸ್ಯದಿಂದ ಅಮೃತವೂ ವಿಷವಾಗುತ್ತದೆ. ನಮ್ಮ ದೇಶದಲ್ಲಿ ಇರುವ ಪ್ರಕೃತಿ ಸಂಪನ್ಮೂಲ, ಮಾನವ ಸಂಪನ್ಮೂಲಗಳ ಅನರ್ಘ್ಯ ನಿಧಿಯನ್ನು ನಾವು ಆಲಸ್ಯ, ಅನಾದರಗಳಿಂದಲೇ ಹಾಳು ಮಾಡುತ್ತಿದ್ದೇವೆ. ದೇವರು ಕೊಟ್ಟದ್ದನ್ನು ಕೂಡ ಅನುಭವಿಸುವ ಯೋಗ್ಯತೆ ನಮಗಿಲ್ಲ. ಇದಕ್ಕೆ ಆಲಸ್ಯವೇ ಮುಖ್ಯ ಕಾರಣ.

ಕೆಲಸ ಮಾಡುತ್ತ ಇರುವುದೇ ಜೀವಂತಿಕೆಯ ಲಕ್ಷಣ. ಮೈಗಳ್ಳತನವೇ ಮರಣದ ಕರೆಗಂಟೆ. ಕೆಲಸ ಮಾಡುವುದು ಆರೋಗ್ಯದಾಯಕ, ಆನಂದದಾಯಕ. ಯಶಸ್ಸಿನ ಮಜಲು ಏರಲು ಸಹಾಯಕ. ಆಲಸ್ಯದಿಂದ ಅಧೋಗತಿ, ಅವಮಾನ. ಆಲಸ್ಯ ಎಂಬುದು ಅಕ್ಷಮ್ಯ ಅಪರಾಧ. ಆಲಸ್ಯ ಎಂಬ ರೋಗಕ್ಕೆ ನಿರಂತರ ಕೆಲಸ ಮಾಡುವುದೇ ಚಿಕಿತ್ಸೆ.



# ಕಾರ್ಯಸಿದ್ಧಿ

ಜೀವನ ಸಾರ್ಥಕತೆ ಇರುವುದು ಕಾರ್ಯಸಿದ್ಧಿಯಲ್ಲಿ. ಸಂತೋಷ ಇರುವುದು ಕಾರ್ಯ ಸಾಧನೆಯಲ್ಲಿ. ಆತ್ಮವಿಶ್ವಾಸ ಇರುವುದು ಸತ್‌ಸಂಕಲ್ಪದಲ್ಲಿ.

ಕಾರ್ಯಸಿದ್ಧಿಯ ಯಶಸ್ಸಿಗೆ ಸತ್‌ಸಂಕಲ್ಪ, ನಿರಂತರ ಸಾಧನೆ ಮತ್ತು ಕೊನೆಯವರೆಗೂ ಪಟ್ಟು ಹಿಡಿದು ಬಿಡದೆ ಛಲದಿಂದ ಯಶಸ್ಸು ಗಳಿಸುವುದೇ ಮುಖ್ಯ ಸೂತ್ರ.

ಬರೀ ಪ್ರತಿಭೆಯಲ್ಲ. ಕೇವಲ ಬುದ್ಧಿವಂತಿಕೆ ಅಲ್ಲ. ಶಿಕ್ಷಣವೂ ಅಲ್ಲ. ಕಾರ್ಯಸಿದ್ಧಿಗೆ ಎಡೆಬಿಡದೆ ಕಾರ್ಯ ಸಾಧಿಸುವ ಹಟ ಬೇಕು.

ಕಾರ್ಯಸಿದ್ಧಿಗೆ ಕೆಲವು ಸೂತ್ರಗಳಿವೆ. ರಾಮಾಯಣದಲ್ಲಿ ಒಂದು ಮಾತಿದೆ -

*ಕಾರ್ಯೇ ಕರ್ಮಣಿ ನಿರ್ದಿಷ್ಟೇ ಯೋ ಬಹೂನ್ಯಪಿ ಸಾಧಯೇತ್ ।*
*ಪೂರ್ವಕಾರ್ಯವಿರೋಧೇನ ಸ ಕಾರ್ಯಂ ಕರ್ತುಮರ್ಹತಿ ॥*

(ಯಾವನು ತನಗೆ ವಹಿಸಿಕೊಟ್ಟ ಕೆಲಸವನ್ನು ಸರಿಯಾಗಿ ಮಾಡಿ, ಆ ಕೆಲಸಕ್ಕೆ ತೊಂದರೆಯಾಗದಂತೆ ಇನ್ನೂ ಇತರ ಕೆಲಸಗಳನ್ನು ಮಾಡುವನೋ ಅವನು ಕಾರ್ಯಗಳನ್ನು ಸಾಧಿಸಿ ತೋರಿಸಬಲ್ಲನು)

ಕೆಲಸದಲ್ಲಿ ಸಂಪೂರ್ಣವಾಗಿ ತನ್ನನ್ನು ಸಕ್ರಿಯವಾಗಿ ತೊಡಗಿಸಿಕೊಳ್ಳುವುದು ಅಂದರೆ ಒಂದು ರೀತಿಯಲ್ಲಿ ಸಮರ್ಪಣಾಭಾವ ಬರುತ್ತದೆ. ತಾನು ಮಾಡುವ ಕಾರ್ಯ ಪವಿತ್ರವಾದುದು ಎಂಬ ನಂಬಿಕೆ ಉಂಟಾಗುತ್ತದೆ. ಅದರಲ್ಲಿ ದಕ್ಷತೆ ಹೆಚ್ಚುತ್ತದೆ. ಕಾರ್ಯ ಸಿದ್ಧಿಯಾಗುತ್ತದೆ.

ಕೆಲವರಿದ್ದಾರೆ. ಕಾರ್ಯ ಆರಂಭ ಮಾಡುತ್ತಾರೆ. ಇಂಥ ಆರಂಭ ಶೂರರಿಗೆ ಆಲಸ್ಯ ಬರುವುದೂ ಬೇಗ. ಆಗ ಕೆಲಸ ಕೆಡುತ್ತದೆ. ಕಾರ್ಯ ಭಂಗವಾಗುತ್ತದೆ. ಅದೃಷ್ಟವನ್ನು ಹಳಿಯುತ್ತೇವೆ. ನಮ್ಮ ಅಸಾಮರ್ಥ್ಯವನ್ನು ಕಾಣದವರಿಗೆ ಆರೋಪಿಸುತ್ತೇವೆ. ಹೆಚ್ಚಿನವರು ಸೋಲು ಕಾಣುವುದು ಇಂಥ ದುರ್ಬಲ ಗಳಿಗೆಯಲ್ಲೇ.

ಚಾಣಕ್ಯ ತನ್ನ ನೀತಿಸೂತ್ರದಲ್ಲಿ 'ಕಾರ್ಯಾಂತರೇ ದೀರ್ಘಸೂತ್ರತಾ ನ ಕರ್ತವ್ಯಾ' ಎಂದು ಹೇಳಿದ್ದಾನೆ. ಕೆಲಸದ ನಡುವೆ ಆಲಸ್ಯ ಮಾಡುವುದು ಎಂದರೆ ಅದು ಕರ್ತವ್ಯಕ್ಕೆ ಅಡ್ಡಿಯೇ ಸರಿ. ಕರ್ತವ್ಯ ಲೋಪದಿಂದ ಕಾರ್ಯಸಿದ್ಧಿ ಕೆಡುತ್ತದೆ.

ಕಾರ್ಯಸಿದ್ಧಿಗೆ ವ್ಯವಸ್ಥಿತ ಮನಸ್ಸು ಬೇಕು. ಕಾರ್ಯಸಾಧನೆಗೆ ಅತ್ಯವಶ್ಯವಾದ ಸಮಾಧಾನ ಚಿತ್ತ, ಪ್ರೀತಿಯನ್ನು ನಾವೇ ಬೆಳೆಸಿಕೊಳ್ಳಬೇಕು. ಕೆಲಸವನ್ನು ಸಾಧಿಸಲಿಚ್ಛಿಸುವವರು ಬಿಗುಮಾನ ಬಿಡಬೇಕು. ದಾಕ್ಷಿಣ್ಯ ಪಟ್ಟುಕೊಳ್ಳಬಾರದು. ಹೀಗೆ ವಸ್ತುನಿಷ್ಠೆಯಿಂದ ಕೆಲಸ ಮಾಡುವ ಶಿಸ್ತು ಕಾರ್ಯಸಿದ್ಧಿಗೆ ಅನಿವಾರ್ಯ.

ಹಿಡಿದುದನ್ನು ಮಾಡಿ ಮುಗಿಸುವುದು, ಅದರಲ್ಲಿ ಆನಂದ ಪಡುವುದು ಒಂದು ವಿಶಿಷ್ಟ, ವಿರಳ ಗುಣ. ಈ ಗುಣವನ್ನು ಹೆಚ್ಚು ಮಂದಿ ಮೈಗೂಡಿಸಿಕೊಂಡಂತೆ ದೇಶದ ಅಭಿವೃದ್ಧಿಯೂ ವೇಗದಿಂದ ಆಗುತ್ತದೆ.

ಅನೇಕರು ಕಾರ್ಯಸಿದ್ಧಿಯ ಹಾದಿಯಿಂದ ಪ್ರಸಿದ್ಧಿಯ ಕಡೆಗೆ ದಾರಿ ತಪ್ಪುತ್ತಾರೆ. ಪ್ರಸಿದ್ಧಿಯ ಚಟ ಹಿಡಿದವರಿಗೆ ಕಾರ್ಯತತ್ಪರತೆಯ ಆನಂದ ಸಿಗಲಾರದು. ಯಶಸ್ಸಿನ ಬೆನ್ನು ಹಿಡಿದವರಿಗೂ ಇದೇ ಗತಿ.

ಕಾರ್ಯಸಿದ್ಧಿಯಲ್ಲಿ ಪ್ರಸಿದ್ಧಿ ಮತ್ತು ಯಶಸ್ಸು ತನ್ನಷ್ಟಕ್ಕೇ ಸಹಜವಾಗಿ ಬರುವುದು ವೈಶಾಖದಲ್ಲಿ ತಂಗಾಳಿ ಬೀಸಿದಂತೆ. ಕಾರ್ಯಸಿದ್ಧಿಯ ಸುಖ ಹಾಗಿರುತ್ತದೆ. ಸಾಧನೆಯ ಆನಂದ ಕಡಿಮೆಯದಲ್ಲ.





# ದಾನ

ಇದ್ದದ್ದು, ದೊರಕಿದ್ದು- ಎರಡನ್ನೂ ಹಂಚಿಕೊಂಡು ತಿನ್ನಬೇಕು ಎಂಬುದೇ ದಾನದ ಮೂಲ ಉದ್ದೇಶ. ಅದೇ ಅದರ ನೀತಿ.

'ದಾನಮೇಕಂ ಕಲೌ ಯುಗೇ (ಕಲಿಯುಗದಲ್ಲಿ ದಾನವೇ ಶ್ರೇಷ್ಠ) ಎಂದು ಪರಾಶರ ಋಷಿ ಅದರ ಬಣ್ಣನೆ ಮಾಡಿದ್ದಾರೆ.

'ಕೊಟ್ಟದ್ದು ತನಗೆ ಬಚ್ಚಿಟ್ಟದ್ದು ಪರರಿಗೆ' 'ಕೆರೆಯ ನೀರನ್ನು ಕೆರೆಗೆ ಚೆಲ್ಲಿ' ಎಂಬ ಗಾದೆ ಮಾತುಗಳು ಈ ಅರ್ಥದಲ್ಲೇ ಬಂದುವು.

ದಾನ ಮಹಾತ್ಮ್ಯ ಬಹಳ ದೊಡ್ಡದು. ಗಳಿಸಿದುದರಲ್ಲಿ ಇಂತಿಷ್ಟೆ ಅಂಶವನ್ನು ದಾನ ಮಾಡಬೇಕು. ಮನಸ್ಸಿಗೂ ಹಿತ. ಆರೋಗ್ಯಕ್ಕೂ ಉತ್ತಮ.

ದಾನ ಕೊಟ್ಟವರ ಸಂಪತ್ತು ಕ್ಷಯಿಸುವುದಿಲ್ಲ. ಹೃದಯ ಸಂಪತ್ತು ಹೆಚ್ಚುತ್ತದೆ. ದಾನ ಕೊಡದವರು ದಾನವರಾಗುತ್ತಾರೆ.

ನಿತ್ಯ, ನೈಮಿತ್ತಿಕ, ಕಾಮ್ಯ, ವಿಮಲ ಎಂದು ದಾನಗಳಲ್ಲಿ ನಾಲ್ಕು ಬಗೆ. ನಿಯಮಾನುಸಾರ ಕೊಡುವುದು ನಿತ್ಯ. ಪಾಪ ನಾಶಕ್ಕೆ ಕೊಡುವ ದಾನ ನೈಮಿತ್ತಿಕ. ಸಂತತಿ, ಸಂಪತ್ತುಗಳಿಗೆ ಮಾಡುವ ದಾನ ಕಾಮ್ಯ. ದೇವರ ಸಂತೋಷಕ್ಕೆ ಮಾಡುವ ನಿಷ್ಕಾಮ ದಾನವೇ ಶ್ರೇಷ್ಠ - ಅದು ವಿಮಲ. (ಮಲ ಇಲ್ಲದ್ದು) ಅತ್ಯಂತ ಪವಿತ್ರ. ದೇವಲೋಕಗಳಲ್ಲಿ ಬರೀ ಇಂಥ ವಿಮಲದಾನಿಗಳೇ ವಿ.ಐ.ಪಿ.ಗಳು. ಅದು ಹೃದಯ ಸಂಪನ್ನ ಲೋಕ.

ಭಗವದ್ಗೀತೆಯಲ್ಲಿ ಕರ್ತವ್ಯ ದೃಷ್ಟಿಯಿಂದ ಮಾಡುವ ಸಾತ್ವಿಕ ದಾನ,

ಕೊಡಬೇಕಲ್ಲ ಎಂಬ ಕ್ಲೇಶದಿಂದ ಕೊಟ್ಟ, ರಾಜಸ ದಾನ, ಅಯೋಗ್ಯರಿಗೆ ಕೊಟ್ಟ ತಾಮಸ ದಾನ - ಹೀಗೆ ಮೂರು ಬಗೆಗಳನ್ನು ಹೇಳಿದ್ದಾರೆ.

ಕೆಲವು ಕಾಯಕ ದಾನ ಮಾಡುತ್ತಾರೆ. ತುಲಾಭಾರ ಇತ್ಯಾದಿ ದಾನ ಈ ವಿಭಾಗಕ್ಕೆ ಸೇರುತ್ತದೆ. ಅಭಯವಚನ ಕೊಡುವುದು, ಇನ್ನೊಬ್ಬರಲ್ಲಿ ಆತ್ಮವಿಶ್ವಾಸ ಮೂಡಿಸುವುದು. ಮಾತಿನ ಸಾಂತ್ವನ ಕೊಡುವುದು ವಾಚಿಕ ದಾನ. ವಿದ್ಯಾಸಂಪಾದನೆ ಮಾಡಿ ಇತರರಿಗೆ ಉಚಿತವಾಗಿ ಹೇಳುವುದು, ಇತರರಿಗೆ ಫಲಸಿಗಲೆಂಬ ಆಶಯವೇ ಮಾನಸಿಕ ದಾನ.

ಅನ್ನದಾನ, ಜ್ಞಾನದಾನ, ಧನದಾನ, ಕನ್ಯಾದಾನ, ಪುಸ್ತಕದಾನ ಹೀಗೆ ಯಾವ ದಾನ ಕೊಟ್ಟರೂ ಅದನ್ನು ಮರಳಿ ಪಡೆಯಲು ಆಸೆ ಮಾಡುವುದು ಯೋಗ್ಯವಲ್ಲ. ಅನ್ನದಾನ, ವಿದ್ಯಾದಾನಗಳು ಯಜ್ಞವೆಂದೇ ಬಗೆದಿದ್ದಾರೆ.

ಸತ್ಪಾತ್ರನಿಗೆ ಕೊಟ್ಟದ್ದೇ ಪಾತ್ರದಾನ. ದೀನ-ದುಃಖಿತರಿಗೆ ಕೊಟ್ಟದ್ದೇ ಕರುಣಾದಾನ. ಧಾರ್ಮಿಕರಿಗೆ ಕೊಟ್ಟದ್ದು ಸಮ. ತನ್ನ ಸಂಪತ್ತನ್ನು ಉತ್ತರಾಧಿಕಾರಿಗೆ ಬಿಟ್ಟುಕೊಡುವುದು ಅನ್ವಯ. ಇವು ನಾಲ್ಕು ಜೈನರಲ್ಲಿ ಇರುವಂಥ ದಾನದ ಬಗೆಗಳು.

ಪ್ರಾಮಾಣಿಕವಾಗಿ ದುಡಿದು ಪಡೆದದ್ದು ಶುಕ್ಲ, ವ್ಯಾಪಾರದಲ್ಲಿ ಸರಿಯಾದ ಲಾಭವಿಟ್ಟು ಪಡೆದ ಹಣ ಮಿಶ್ರಿತ. ತಪ್ಪು ದಾರಿಯಲ್ಲಿ ಮಾಡಿದ್ದೇ ಕೃಷ್ಣ. ಕಪ್ಪು ಹಣ ಕೆಟ್ಟ ದಾರಿಯಲ್ಲಿ ಮಾಡಿದ ಹಣದ ದಾನಕ್ಕೆ ಒಳ್ಳೆಯ ಫಲವಿಲ್ಲ.

ವಿನೋಬಾ ಭಾವೆ ಅವರು 'ಪುಷ್ಪಾಂಶದಾನ' ಕಲ್ಪನೆ ಮಾಡಿದರು. ನಾವು ಗಳಿಸಿದುದರಲ್ಲಿ ಆರನೆಯ ಒಂದು ಪಾಲನ್ನು ಸಮಾಜಕ್ಕೆ ಕೊಡಬೇಕು. ನಮ್ಮ ಕುಟುಂಬದಲ್ಲಿ ಇನ್ನೊಬ್ಬ ವ್ಯಕ್ತಿ ಇದ್ದಾನೆ ಎಂದು ತಿಳಿದುಕೊಂಡು ಅಷ್ಟು ದಾನ ಮಾಡಿ ಎಂದು ಅವರನ್ನುತ್ತಿದ್ದರು.





# ಸಂಸಾರ

**ನಾ**ನು, ಹೆಂಡತಿ, ಮಕ್ಕಳು, ನನ್ನ ಭೂಮಿ, ಮನೆ, ಧನ, ಕನಕ ಈ ಚೌಕಟ್ಟಿನೊಳಗೇ ವಿಹರಿಸುವ ನಾವು ನಿಜವಾಗಿಯೂ ಎಷ್ಟು ಸುಖಿಗಳು?

ಪುರಂದರದಾಸರು ಹೇಳುತ್ತಾರೆ -

*ಕೆಟ್ಟ ಸಂಸಾರದಿ ಎಷ್ಟಕ್ಕೂ ಸುಖವಿಲ್ಲ ರಾಮ ರಾಮ*

ಆದರೂ ನಾವು ಈ ಸಂಸಾರವನ್ನೇ ಮತ್ತೆ ಮತ್ತೆ ಅಪ್ಪಿಕೊಳ್ಳುತ್ತೇವಲ್ಲ? ಇದನ್ನೇ ಸುಖ ಎಂದು ಭ್ರಮಿಸುತ್ತೇವಲ್ಲ!

ಈ ಸಂಸಾರವನ್ನು ನೀರ ಮೇಲಣ ಗುಳ್ಳೆ ಎಂದು ಎಲ್ಲ ಸಂತರು, ಋಷಿಮುನಿಗಳು ಎಚ್ಚರಿಸಿ ಹೇಳಿದ್ದೇ ಹೇಳಿದ್ದು. ಆದರೆ ನಾವೆಲ್ಲ ಇನ್ನೂ ಸಂಸಾರದಲ್ಲೇ ಮುಳುಗಿದ್ದೇವೆ. ಏಕೆ ಕೈಕಾಲು ಬಡಿಯುತ್ತೇವೆ ಎಂದು ಕೂಡ ನಮಗೆ ಗೊತ್ತಿಲ್ಲ.

*'ಎಂತು ನೋಡಿದರೂ ಚಿಂತೆ ಈ ಒಡಲು*
*ನಿಶ್ಚಿಂತರಾಗಿಹರ ನಾನೆಲ್ಲು ಕಾಣೆ'*

ದಾಸರು ಮತ್ತೆ ಮತ್ತೆ ಅದನ್ನೇ ಉದ್ಗರಿಸುತ್ತಾರೆ. ಜೀವನವೆಲ್ಲ ಒಂದಲ್ಲ ಒಂದು ಕಾರಣಕ್ಕೆ ಚಿಂತೆ. ಇದು ಯಾರಿಗೂ ಬಿಟ್ಟದ್ದಲ್ಲ.

*'ಕರ್ಮದಿ ಒಂದು ಚಿಂತೆ, ಧರ್ಮದಿ ಒಂದು ಚಿಂತೆ....*
*ಗಂಗೆಯೊಳ್ಮುಳುಗುವಾಗ ಚೆಂಬು ಮೇಲಿನ ಚಿಂತೆ....'*

ಇಂಥ ಸಂಸಾರದಲ್ಲಿ 'ಕಾಲ ಕಳೆದೆನಲ್ಲಾ ಜ್ಞಾನ ಬರಲಿಲ್ಲವಲ್ಲಾ' ಎಂದು ದಾಸರು ಮತ್ತೆ ಹಲುಬುತ್ತಾರೆ. ಆಯುಷ್ಯವೆಲ್ಲ ವ್ಯರ್ಥವಾಗಿ ಕಳೆದೆನಲ್ಲ, ಈ ಬದುಕು ಯಾವುದಕ್ಕೂ ಉಪಯೋಗವಾಗಲಿಲ್ಲವಲ್ಲ ಎಂದು ಪಶ್ಚಾತ್ತಾಪ ಪಡುತ್ತಾರೆ. ದೇವರನ್ನು ಅನುಭವಿಸದೆ ಮತ್ತೊಂದು ದಿನ ಹೋಯಿತಲ್ಲ ಎಂದು ರಾಮಕೃಷ್ಣ ಪರಮಹಂಸರು ದುಃಖಿಸುತ್ತಿದ್ದರಂತೆ.

ಜೀವನವಿಡೀ ತಾನು, ಹೆಂಡತಿ, ಮಕ್ಕಳು, ಮನೆ, ಬ್ಯಾಂಕ್ ಬ್ಯಾಲೆನ್ಸ್, ಷೇರುಗಳು, ಭೂಮಿ, ಕಾಣ್ಕೆ, ಇವುಗಳ ಪರಿಧಿಯಲ್ಲೇ ಸುತ್ತಿದವರಿಗೆ ಜ್ಞಾನೋದಯವಾಗುವಾಗ ತುಂಬ ತಡವಾಗುತ್ತದೆ. ಅಯ್ಯೋ, ನಾನು ಯಾರಿಗಾಗಿ ಬದುಕಿದೆ? ಏಕೆ ಬದುಕಿದೆ? ಹೇಗೆ ಬದುಕಿದೆ? ಎಂದು ಪರಿತಪಿಸುವವರಿದ್ದಾರೆ. ಅದು ತಡವಾಗಿ ಬರುವ ಪಶ್ಚಾತ್ತಾಪ. ಕೆಲವರಿಗೆ ಅದೂ ಇಲ್ಲ!

ಹಾಗಾದರೆ ಸಂಸಾರ ಬಿಟ್ಟು ಪಲಾಯನ ಮಾಡಬೇಕೆ? ಬೇಡ, ಬೇಡ, ಖಂಡಿತ ಬೇಡ. ಈ ಸಂಸಾರದಲ್ಲೇ ಇರೋಣ. ಆದರೆ ಹೇಗೆ ಇರಬೇಕು? ದಾಸರು ಅದಕ್ಕೂ, ಉಪಾಯ ಹೇಳಿದ್ದಾರೆ.

*ಹ್ಯಾಂಗೆ ಬರೆದಿತ್ತೋ ಪ್ರಾಚೀನದಲ್ಲಿ*
*ಹಾಂಗೆ ಇರಬೇಕು ಸಂಸಾರದಲ್ಲಿ*
*ಪಕ್ಷಿ ಅಂಗಳದಲ್ಲಿ ಬಂದು ಕೂತಂತೆ*
*ಆ ಕ್ಷಣದಲ್ಲಿ ಹಾರಿ ಹೋದಂತೆ*
*ನಾನಾ ಪರಿಯಲಿ ಸಂತೆ ನೆರೆದಂತೆ*
*ನಾನಾ ಪಂಥವ ಹಿಡಿದು ಹೋದಂತೆ*
*ಮಕ್ಕಳಾಡಿ ಮನೆ ಕಟ್ಟಿದಂತೆ*
*ಆಟ ಸಾಕೆಂದು ಅಳಿಸಿ ಪೋದಂತೆ*
*ವಸತಿಕಾರನು ವಸತಿ ಕಂಡಂತೆ*
*ಹೊತ್ತಾರೆದ್ದು ಹೊರಟು ಹೋದಂತೆ*
*ಸಂಸಾರ ಪಾಶವ ನೀನೆ ಬಿಡಿಸಯ್ಯ*
*ಕಂಸಾರಿ ಪುರಂದರ ವಿಠಲರಾಯ*

ಸಾರ ಇಲ್ಲದ ಸಂಸಾರದ ಬಗ್ಗೆ ನಾವೇಕೆ ಸ್ವಾರಸ್ಯ ಕಾಣಬೇಕು?



# ಜೀವನ ರೇಖೆ

ಶ್ರೀಮದ್ರಾಮಾಯಾಣದಲ್ಲಿ ಸೀತೆಯ ರಕ್ಷಣೆಗಾಗಿ ಲಕ್ಷ್ಮಣನು ತನ್ನ ಮತ್ತು ತನ್ನ ಹಿರಿಯರ ಪುಣ್ಯವನ್ನೆಲ್ಲ ಧಾರೆ ಎರೆದು ಲಕ್ಷ್ಮಣ ರೇಖೆಯನ್ನು ಹಾಕುವ ಪ್ರಸಂಗ ಎಲ್ಲರಿಗೂ ಗೊತ್ತು. ಆ ಲಕ್ಷ್ಮಣ ರೇಖೆಯನ್ನು ದಾಟಿದಾಗ ಸೀತೆಗೆ ಎಂಥ ಕಷ್ಟ ಪರಂಪರೆ ಬಂತೆಂಬುದೇ ರಾಮಾಯಣದ ಮುಂದಿನ ಕತೆ.

ನಮ್ಮೆಲ್ಲರ ಬದುಕಿನಲ್ಲೂ ಲಕ್ಷ್ಮಣರೇಖೆಗಳು ಇದ್ದೇ ಇರುತ್ತವೆ. ಅದರ ಒಳಗೆ ಇರುವ ತನಕ ಸುರಕ್ಷಿತವಾಗಿರುತ್ತೇವೆ. ಅದನ್ನು ದಾಟಿದಾಗ ಸಮಸ್ಯೆಗಳೇ ಎದುರಾಗುತ್ತವೆ.

ಅನೇಕರು ಈ ರೇಖೆಯನ್ನು ದಾಟಲು ಧೈರ್ಯವಿಲ್ಲದೆ ಅಲ್ಲೇ ಕುಗ್ಗಿ, ಕುಸಿಯುತ್ತಾರೆ. ಮುದುಡಿ ಬಿಡುತ್ತಾರೆ. ಕೆಲವು ಸಾಹಸಿಗರು ಮಾತ್ರ ಧೈರ್ಯದಿಂದ ರೇಖೆಯನ್ನು ದಾಟಿ ಭಾರೀ ಸಾಧನೆ ಮಾಡುತ್ತಾರೆ.

ಸೀತೆ ಲಕ್ಷ್ಮಣರೇಖೆ ದಾಟದಿದ್ದರೆ ರಾಮಾಯಣವೇ ಆಗುತ್ತಿರಲಿಲ್ಲ. ಅದು ಬರೀ ಸಪ್ಪೆ ಅನಿಸುತ್ತಿತ್ತು. ರೇಖೆಯ ಉಲ್ಲಂಘನವೇ ಕತೆಗೊಂದು ತಿರುವಿನ ಉಡ್ಡಾಣ (ಟೇಕ್ ಆಫ್) ಕೊಡುತ್ತದೆ. ಕತೆ ಸ್ವಾರಸ್ಯಕರವಾಗಿ ಮುಂದುವರಿಯುತ್ತದೆ.

ಬದುಕಿನ ಲಕ್ಷ್ಮಣರೇಖೆಯನ್ನು ದಾಟಬೇಕೆ ಬೇಡವೇ ಎಂಬುದೇ ಬಹಳ ಮುಖ್ಯ ನಿರ್ಧಾರ. ಅದೇ ಸೋಲು ಗೆಲುವಿನ ತಾರತಮ್ಯದ ನಿರ್ಧಾರವನ್ನೂ ಮಾಡುತ್ತದೆ. ಜೀವನಕ್ಕೆ ಆಯಾಮ ಕೊಡುವುದೇ ಈ ರೇಖೆ. ಕಲಾಕೃತಿಯಲ್ಲಿ ಬಿಂದು ಮತ್ತು ರೇಖೆಗಳು (ಜೀವನರೇಖೆ) ಅದರ ಸತ್ವವನ್ನು ಹೇಳುವಂತೆ ಬದುಕಿನಲ್ಲೂ ಇವು ತಿರುವನ್ನು ಕೊಡುತ್ತವೆ. ಬದುಕಿನ ಶೈಲಿ ರೂಪಿಸುತ್ತದೆ. ಜೀವನದಲ್ಲಿ ಲಯಬದ್ಧತೆ ಬರುತ್ತದೆ.

ಸ್ವಾರಸ್ಯ ಹೆಚ್ಚಿ ನೃತ್ಯ-ಸಂಗೀತಗಳೂ ಬಾಳಲ್ಲಿ ಉಲ್ಲಾಸ ಉಂಟುಮಾಡುತ್ತವೆ. ಜೀವನವೇ ಒಂದು ಕಲಾಕೃತಿಯಾಗುತ್ತದೆ.

ಪತ್ರಿಕೋದ್ಯಮದಲ್ಲಿ 'ಡೆಡ್‌ಲೈನ್' - ಅಂತಿಮ ಗಡುವು ಎಂಬುದಿದೆ. ಮುದ್ರಣಕ್ಕೆ ಹಸ್ತಪ್ರತಿ, ಚಿತ್ರ ಕೊಡಲು ಒಂದು ಅಂತಿಮ ಅವಧಿಯ ಮಿತಿ ಇರುತ್ತವೆ. ಇದು ಬಹಳ ಮುಖ್ಯ. ಎಲ್ಲ ಕೆಲಸಗಳೂ ಈ ಕಾಲಾವಧಿಯ ಮಿತಿಯಲ್ಲೇ ಜರುಗಬೇಕು. ಆ ಕೊಂಡಿ ತಪ್ಪಿದರೆ ಪತ್ರಿಕೆ ಸಕಾಲಕ್ಕೆ ಬರುವುದಿಲ್ಲ. ಆ ದೃಷ್ಟಿಯಲ್ಲಿ ಇದು ಪತ್ರಿಕೋದ್ಯಮದ ಲಕ್ಷ್ಮಣರೇಖೆಯೇ.

ಜೀವನದಲ್ಲಿ ಈ ರೇಖೆಗಳನ್ನೇ ಸಂಕಲ್ಪಗಳನ್ನಾಗಿ ಮಾಡಿಕೊಂಡು ಸಾಧನೆ ಮಾಡುತ್ತಾರೆ. ಅದು ನಮ್ಮಷ್ಟಕ್ಕೇ ನಾವು ಪ್ರತಿಜ್ಞೆ ಮಾಡಿಕೊಂಡು, ನಮ್ಮ ಮಾತನ್ನು ನಾವೇ ಗೌರವಿಸುವ ಕ್ರಮ. ಕೊಟ್ಟ ಮಾತು ತಪ್ಪಬಾರದು ಎಂಬುದು ಇಂಥ ಒಂದು ಮೌಲ್ಯ. ಹಿಡಿದ ಕೆಲಸ ಮಾಡಿಯೇ ತೀರುತ್ತೇನೆ. ಅದು ಮುಗಿಸದೆ ಮುಂದಿನ ಕೆಲಸಕ್ಕೆ ಹೋಗುವುದಿಲ್ಲ ಎಂಬ ಶಪಥವೂ ಇಂಥ ಒಂದು ಸಾಧನೆ. ಅದು ನಾವೇ ಹಾಕಿಕೊಂಡ ರೇಖೆ. ಅದಕ್ಕೆ ನಾವು ನಾವೇ ಬದ್ಧರು.

ಓಟದಲ್ಲಿ ಮುಟ್ಟಬೇಕಾದ ರೇಖೆಯೊಂದಿರುತ್ತದೆ. ಓಟದ ಸ್ಪರ್ಧೆಯಲ್ಲಿ ಯಾರು ಮೊದಲು ಅದನ್ನು ಮುಟ್ಟುತ್ತಾರೆಯೋ ಅವರು ವಿಜಯಿಗಳು. ಕ್ರಿಕೆಟ್‌ನಲ್ಲಿ ಬೌಂಡ್ರಿ ರೇಖೆ ಇರುತ್ತದೆ. ದಾಟಿದರೆ ಬೌಂಡ್ರಿ, ಹಾರಿದರೆ ಸಿಕ್ಸರ್. ವಿಕೆಟಿನ ಮುಂದಿರುವ ರೇಖೆಯೂ ಒಂದು ಅಗ್ನಿರೇಖೆ. ಜೀವನದಾಟ ಇದಕ್ಕಿಂತ ಭಿನ್ನವಲ್ಲ. ಜೀವನದಲ್ಲಿ ಈ ಎಲ್ಲ ರೇಖೆಗಳೂ ಕುಣಿಯುತ್ತವೆ, ಹಾಡುತ್ತವೆ.

ಜೀವನದಲ್ಲಿಯೂ ರೇಖಾವಿನ್ಯಾಸವಿರಬೇಕು. ಆಗ ಅದು ಕಲೆಯೊಳು ಪರಮಕಲೆಯಾಗುತ್ತದೆ.





# ಗುಣ

ಜೀವನ ಸತ್ವಪರೀಕ್ಷೆಯಲ್ಲಿ ಗೆದ್ದು ಬರುವುದೇ ಮನುಷ್ಯನ ಉತ್ತಮ ಗುಣ. ಸಮಸ್ಯೆಗಳನ್ನು ಎದುರಿಸಲು ತನ್ನನ್ನು ರಕ್ಷಿಸಿಕೊಂಡು ಆತ್ಮವಿಶ್ವಾಸದಿಂದ ಬರಬೇಕಾದರೆ ಅದಕ್ಕೆ ತಕ್ಕ ಮಾನಸಿಕ ಸಿದ್ಧತೆ ಬೇಕು. ಒಳ್ಳೆಯ ಗುಣಗಳು ಅದಕ್ಕೆ ರಕ್ಷಣೆ ಒದಗಿಸುತ್ತವೆ.

ಚಾಣಕ್ಯನು ತನ್ನ ನೀತಿಶಾಸ್ತ್ರದಲ್ಲಿ ಈ ಪರೀಕ್ಷೆಗಳು ಜೀವನ ನಿರ್ಮಾಣಕ್ಕೆ ಅತ್ಯಂತ ಅವಶ್ಯವೆಂದು ವರ್ಣಿಸಿದ್ದಾನೆ.

*ಯಥಾ ಚತುರ್ಭಿಃ ಕನಕಂ ಪರೀಕ್ಷ್ಯತೇ*
*ನಿಘರ್ಷಣ - ಚ್ಛೇದನ - ತಾಪ - ತಾಡನೈ: ।*
*ತಥಾ ಚತುರ್ಭಿಃ ಪುರುಷಃ ಪರೀಕ್ಷ್ಯತೇ*
*ತ್ಯಾಗೇನ ಶೀಲೇನ ಗುಣೇನ ಕರ್ಮಣಾ ॥*

ಚಿನ್ನವನ್ನು ನಾಲ್ಕು ಬಗೆಯಲ್ಲಿ ಪರೀಕ್ಷಿಸಿದಂತೆ ಮನುಷ್ಯನ ಪರೀಕ್ಷೆಯೂ ನಡೆಯಬೇಕು. ತಿಕ್ಕುವುದು, ಕತ್ತರಿಸುವುದು, ಬಿಸಿಮಾಡುವುದು ಮತ್ತು ಹೊಡೆಯುವ ಕ್ರಿಯೆಗಳ ಅನುಭವದಿಂದ ಮನುಷ್ಯನು ಅನುಭವ ಪಡೆಯುತ್ತಾನೆ. ಅವನ ತ್ಯಾಗ, ಶೀಲ, ಗುಣ, ಕೆಲಸ ಇವುಗಳ ಸತ್ವ ಹೊರಬರುತ್ತದೆ. ಇಂಥ ತಿಕ್ಕಾಟದಿಂದಲೇ ಹೊಳಪು ಉಂಟಾಗುತ್ತದೆ.

ಒಳ್ಳೆಯ ಗುಣವಿದ್ದವರನ್ನು ಎಲ್ಲೆಲ್ಲೂ ಗೌರವಿಸುತ್ತಾರೆ. ಕೇವಲ ಅವರಿಗೆ ಪಾಂಡಿತ್ಯ, ಶ್ರೀಮಂತಿಕೆ ಇದ್ದರೆ ಸಾಲದು. ಮನುಷ್ಯನು ತನ್ನ ಗುಣ ಮತ್ತು ತನ್ನ ಸ್ಥಾನಕ್ಕೆ ಗೌರವ ತರುತ್ತಾನೆ.

ಉತ್ತಮವಾಗಿ ಒಬ್ಬರ ಮನಸ್ಸನ್ನು ಪ್ರಸನ್ನಗೊಳಿಸುವ ಗುಣಗಳು ಒಳ್ಳೆಯ ವಲಯವನ್ನು ನಿರ್ಮಿಸುತ್ತವೆ. ಆದರೆ ಮನಸ್ಸಿನಲ್ಲಿ ಉತ್ತಮ ವಿಚಾರಗಳೇ ಹೊಳೆಯುತ್ತವೆ. ಅಂಥ ಯೋಗ್ಯತೆಯಿಂದ ಒಳ್ಳೆಯ ಮಾತುಗಳೇ ಬಾಯಿಯಲ್ಲಿ ಬರುತ್ತದೆ.

ಗುಣದಿಂದ ಸ್ಥಾನಕ್ಕೆ ಮಹತ್ವ, ಸ್ಥಾನದಿಂದ ಮಹತ್ವ ಪ್ರಾಪ್ತಿಯು ತಾತ್ಕಾಲಿಕ

*ಗುಣೈರುತ್ತಮತಾಂ ಯಾಂತಿ ನೋಚ್ಚೈರಾಸನಸಂಸ್ಥಿತಃ ।*
*ಪ್ರಾಸಾದಶಿಖರಸ್ಥೋಽಪಿ ಕಾಕಃ ಕಿಂ ಗರುಡಾಯತೇ ॥*

ಗುಣದಿಂದಲೇ ಮಾನವನು ಶ್ರೇಷ್ಠನೆನಿಸಿಕೊಳ್ಳುತ್ತಾನೆ. ಮೇಲೆ, ಎತ್ತರದಲ್ಲಿ ಕೂತುಕೊಂಡೊಡನೆ ಅವರನ್ನು ಶ್ರೇಷ್ಠರೆಂದು ಯಾರು ಹೇಳುತ್ತಾರೆ? ದೇವಸ್ಥಾನದ ಶಿಖರದಲ್ಲಿ ಕೂತೊಡನೆ ಕಾಗೆಯನ್ನು ಗರುಡ ಎನ್ನಲಾದೀತೆ?

ಪ್ರತಿದಿನ ಇಂಥ ಗರುಡರನ್ನು ಕಾಣುತ್ತೇವೆ. ಕಾಗೆಗಳನ್ನೂ ನೋಡುತ್ತೇವೆ.

ಗುಣದಿಂದಲೇ ಮನುಷ್ಯನ ಬದುಕಿನ ಗತಿಯ ನಿರ್ಣಯವೂ ಆಗುತ್ತದೆ. ಗುಣದಿಂದಲೇ ಅವನ ಜೀವನ ಮೌಲ್ಯ ಹೆಚ್ಚುತ್ತದೆ.

ಉತ್ತಮ ಗುಣದ ಮೌಲ್ಯಕ್ಕೆ ಸರಿಹೋಗುವಂಥದ್ದು, ಉತ್ತಮ ಜೀವನ ಮಾತ್ರ. ಅವು ಪರಸ್ಪರ ಪೂರಕ. ಒಳ್ಳೆಯ ಗುಣದಿಂದ ಒಳ್ಳೆಯ ಜೀವನ. ಅವನ್ನು ಉತ್ತಮಪಡಿಸಲು ಸೂರ್ಯ-ಚಂದ್ರರೇ ಗಡಿ.



# ಕೃತಜ್ಞತೆ - ಕೃತಘ್ನತೆ

ಆಪತ್ಕಾಲದಲ್ಲಿ ಸಹಾಯ ಕೊಟ್ಟವರ ಉಪಕಾರವನ್ನು ನೆನಪಿಟ್ಟುಕೊಂಡು ಕೃತಜ್ಞತೆ ಸಲ್ಲಿಸುವುದು ಬದುಕಿನಲ್ಲಿ ಒಂದು ಸಾರ್ಥಕ ಮೌಲ್ಯ. ಉಪಕಾರ ಮಾಡಿದವರಿಗೆ ಅವಕಾಶ ದೊರೆತಾಗ ಪ್ರತ್ಯುಪಕಾರ ಮಾಡುವುದು ಸಹಜ ಕರ್ತವ್ಯ. ವಿಶೇಷ ಗುಣ.

ಉಪಕಾರ ಮಾಡಿದವರನ್ನು ಮರೆತು ಬಿಡುವುದು ಪಾಪಿಯ ಲಕ್ಷಣ. ಅದು ಕೃತಘ್ನತೆ. ಹೊಳೆ ದಾಟಿದ ಬಳಿಕ ಅಂಬಿಗ ಏಕೆ? ಏಣಿಯ ಮೆಟ್ಟಲು ಏರಿ ಮೇಲೆ ಹೋದಂತೆ ಕೆಳಗಿನ ಮೆಟ್ಟಲನ್ನು ಮರೆತು ಬಿಡುವವರಿಲ್ಲವೆ? ಕೃತಘ್ನತೆ ಅಧಮರ ಪ್ರವೃತ್ತಿ.

ಕೃತಜ್ಞತೆಗೂ ಕೃತಘ್ನತೆಗೂ ಇರುವ ಅಂತರ ಕೂದಲು ಎಳೆಯಷ್ಟು. ಅದು ಮನಸ್ಸಿನೊಳಗೆ ನಡೆಯುವ ಕಾರ್ಯ. ಕೃತಜ್ಞತೆ ಎಂಬುದು ದೈವಿಕ ಗುಣ. ಕೃತಘ್ನತೆ ರಾಕ್ಷಸರ ಗುಣ. ಕೃತಜ್ಞ ಮತ್ತು ಕೃತಘ್ನ ಉಚ್ಚಾರ ವ್ಯತ್ಯಾಸ ಗೊತ್ತಿಲ್ಲವೆ?

'ಯಥಾ ವಾಕ್ಯಂ ತಥಾ ಕರ್ಮ, ಯಥಾ ಕರ್ಮ ತಥಾ ಫಲಂ' ಎಂಬಂತೆ ಮಾತಿನಂತೆ ಕ್ರಿಯೆ. ಕ್ರಿಯೆಯಂತೆ ಫಲ.

ಒಂದು ಸವಿ ಮಾತಿನಿಂದ ಕೃತಜ್ಞತೆ ಸೂಚಿಸಿದರೂ ಸಾಕು. ಆದರೆ ಆ ಕೃತಜ್ಞತಾ ಭಾವ ಅಪ್ಪಟವಾಗಿರಬೇಕು. ಮನಃಪೂರ್ವಕವಾಗಿರಬೇಕು. ಹೃದಯದಿಂದ ಬಂದಿರಬೇಕು. ಒಲುಮೆ ಚಿಗುರುತ್ತದೆ.

ಕಾಟಾಚಾರಕ್ಕೆ ಹೇಳುವ 'ಥ್ಯಾಂಕ್ಯೂ' ಗೂ ಮನತುಂಬಿ ಹೇಳುವ 'ಥ್ಯಾಂಕ್ಯೂ' ಗೂ ವ್ಯತ್ಯಾಸವಿಲ್ಲವೆ? ಆ ಧ್ವನಿಯಲ್ಲೇ ಅದರ ಭಾವ ತುಂಬಿರುತ್ತದೆ.

ಕೃತಜ್ಞತೆ ಸಲ್ಲಿಸುವುದು ಗುಲಾಮಗಿರಿಯ ಲಕ್ಷಣ ಎಂದು ಅಹಂಕಾರಿಗಳು ತಿಳಿದುಕೊಳ್ಳುತ್ತಾರೆ. ಕೆಲಸ ಮಾಡಿದ ಸೇವಕನ ಅಚ್ಚುಕಟ್ಟುತನ ಸ್ಮರಿಸಿಕೊಳ್ಳುವುದೂ ಕೃತಜ್ಞತೆಯ ಒಳ್ಳೆಯ ಗುಣ. ಇದು ಅಪ್ಪಟ ಭಾರತೀಯ ಸಂಸ್ಕಾರ.

*ಕೃತಕೃತ್ಯಸ್ಯ ಭೃತ್ಯಸ್ಯ ಕೃತಂ ನೈವ ಪ್ರಣಾಶಯೇತ್ ।*

*ಫಲೇನ ಮನಸಾ ವಾಚಾ ದೃಷ್ಟ್ಯಾ ಚೈನಂ ಪ್ರಹರ್ಷಯೇತ್ ॥*

(ಕೆಲಸವನ್ನು ಮಾಡಿ ಮುಗಿಸಿದ ಸೇವಕನ ಕೆಲಸವನ್ನು ಏನೂ ಮಾಡಿಲ್ಲ ಎಂಬಂತೆ ಅಲ್ಲಗಳೆಯಬಾರದು. ಅವನ ಮನಸ್ಸು, ಕಣ್ಣು, ಫಲಗಳಿಂದಲೂ ಮಿಗಿಲಾಗಿ ಹುರಿದುಂಬಿಸಬೇಕು)

ಯಜಮಾನನೂ ತನ್ನ ಸೇವಕನಿಗೆ ಕೃತಜ್ಞನಾಗಿರಬೇಕು ಎಂಬ ಈ ಮಾತು ಸಾವಿರಾರು ವರ್ಷಗಳ ಹಿಂದಿನಿಂದ ನಡೆದುಕೊಂಡು ಬಂದ ಭಾರತೀಯ ಮೌಲ್ಯ.

ಈ ರೀತಿಯ ಪರಸ್ಪರ ಕೃತಜ್ಞತಾಭಾವದಿಂದ ಪ್ರೀತಿ, ವಿಶ್ವಾಸಗಳು ಬೆಳೆಯುತ್ತವೆ. ಅಂಥ ಕೃತಜ್ಞತಾಭಾವ ಎಂದಿಗೂ ನಿಷ್ಫಲವಾಗದು.

ಕೃತಘ್ನರ ಬಗ್ಗೆ ಬಲು ಕಠಿಣ ಮಾತುಗಳು ಸಹಜವಾಗಿ ಬಂದೇ ಬರುತ್ತವೆ.

*ಕೃತಘ್ನಾನಾಂ ಶಿವಂ ಕುತಃ*

(ಕೃತಘ್ನರಿಗೆ ಶುಭಮಂಗಳವೆಲ್ಲಿ ಬರಬೇಕು?)

ಕೃತಘ್ನರಿಗೆ ಒಳ್ಳೆಯದಾಗುವುದಿಲ್ಲ ಎಂಬುದೇ ಎಚ್ಚರಿಕೆ.

ಕೃತಜ್ಞತೆ ಎಂಬುದು ಇತ್ಯಾತ್ಮಕವಾದ (Positive) ಸಹಜ ಪ್ರವೃತ್ತಿ. ಕೃತಘ್ನತೆ ಎಂಬುದು ನೇತ್ಯಾತ್ಮಕವಾದ (Negative) ಪ್ರಕೃತಿ ವಿರೋಧೀ ಪ್ರವೃತ್ತಿ.

ಕೃತಜ್ಞತೆ ಮನಸ್ಸನ್ನು ವಿಶಾಲ ಭಾವಕ್ಕೆ, ಉದಾತ್ತ ಗುಣಗಳಿಗೆ ಅನುವು ಮಾಡಿಕೊಡುತ್ತದೆ.

ಕೃತಘ್ನತೆ ಮನಸ್ಸನ್ನು ಸಂಕುಚಿತಗೊಳಿಸುತ್ತಲೇ ಹೋಗುತ್ತದೆ.

ಕೃತಘ್ನರು ಜೀವನದ ಅತ್ಯಂತ ಕೆಟ್ಟ, ಲೋಭಿಗಳು. ಅವರು ಜಿಪುಣತನದಿಂದ ಕುರುಡರಾಗುತ್ತಾರೆ. ಅಂಥವರು ಉಪಕಾರದ ದೃಷ್ಟಿಗೆ ಯೋಗ್ಯರಲ್ಲ.

ಕೃತಜ್ಞತೆಯಿಂದ ಮನಸ್ಸು, ಬದುಕು ಅರಳುತ್ತದೆ. ಕೃತಘ್ನತೆಯಿಂದ ಮನಸ್ಸು, ಜೀವನ ಮುದುಡುತ್ತದೆ. ಆಯ್ಕೆ ಅವರವರಿಗೇ ಬಿಟ್ಟದ್ದು.



# ಬೇಕಾಗಿದ್ದಾನೆ!

**ಶಾ**ಲೆ ಆರಂಭವಾಗುವ ಸಂದರ್ಭದಲ್ಲಿ ಅಮೇರಿಕದ ಒಂದು ಪತ್ರಿಕೆಯಲ್ಲಿ ಈ ಜಾಹೀರಾತು ಪ್ರಕಟವಾಗಿತ್ತು -

★ ನೇರವಾಗಿ ನಿಲ್ಲುವ, ನಡೆದಾಡುವ, ಮಾತನಾಡುವ ಹುಡುಗ ಬೇಕಾಗಿದ್ದಾನೆ.

★ ಅವನ ಉಗುರುಗಳು ಕಂಗೆಟ್ಟಿರಕೂಡದು. ಕಿವಿಗಳು ಚುರುಕಾಗಿರಬೇಕು. ಚೆನ್ನಾಗಿ ಬಾಚಿದ ಕೂದಲುಗಳಿರಬೇಕು. ಹಲ್ಲುಗಳು ಲಕ ಲಕ ಹೊಳೆಯುತ್ತಿರಬೇಕು.

★ ಇನ್ನೊಬ್ಬರು ಮಾತನಾಡುವಾಗ ಏಕಚಿತ್ತದಿಂದ ಕೇಳುವ ತಾಳ್ಮೆ ಇರಬೇಕು. ತಿಳಿಯದಿದ್ದಾಗ ಪ್ರಶ್ನಿಸುವ ಕುತೂಹಲ ಇರಬೇಕು. ಗೊತ್ತಿಲ್ಲದಾಗ ಗೊತ್ತಿಲ್ಲ ಎಂದು ಹೇಳುವ ಪ್ರಾಮಾಣಿಕತೆ ಬೇಕು. ಅಧಿಕ ಪ್ರಸಂಗ ಮಾಡುವಂಥ ತಳಮಳ ನಿಯಂತ್ರಿಸಿಕೊಳ್ಳುವಂಥವನು ಬೇಕು.

★ ಯಾವಾಗಲೂ ಪ್ರಸನ್ನವದನನಾಗಿರಬೇಕು. ನಗುಮುಖದಿಂದ ಕಳೆ ಸೂಸುತ್ತಿರಬೇಕು. ಎಂದೂ ದುರ್ಮುಖಿ ಆಗಬಾರದು. (ಮುಖಕ್ಕೆ ಗಂಟಿಕ್ಕಬಾರದು)

★ ನಮ್ರತೆ ಮತ್ತು ವಿನಯಗಳೇ ಹುಡುಗನ ಆಭರಣ, ಉಡುಪು ಆಗಿರಬೇಕು. ಇತರರನ್ನು ಗೌರವಿಸುವ ಗುಣವಿರಬೇಕು. ಬೇರೆಯವರ ಕಷ್ಟಗಳನ್ನು ಸಹಾನುಭೂತಿಯಿಂದ ಪರಿಗಣಿಸುವ ಔದಾರ್ಯ ಇರಬೇಕು.

★ ಸಿಗರೇಟು, ಬೀಡಿ ಸೇದಬಾರದು. ಮುಂದೆ ಸೇದಲು ಕಲಿಯುವ ಕುತೂಹಲವೂ ಇರಬಾರದು.

★ ತಪ್ಪು ಮಾಡಿದಾಗ 'ಸಾರಿ' ಎಂದು ಮನಃಪೂರ್ವಕ ಒಪ್ಪಿಕೊಳ್ಳುವ ಗುಣವಿರಬೇಕು. ಕೆಲಸ ಮಾಡಬೇಕೆಂದು ಹಿರಿಯರು ಹೇಳಿದಾಗ ''ಸಾರಿ, ನಾನು ಪ್ರಯತ್ನಿಸುತ್ತೇನೆ'' ಎಂಬ ಸಹಕಾರ ಮನೋಭಾವ ಅಗತ್ಯ.

★ ಮಾತನಾಡುವಾಗ ನೇರ ಕಣ್ಣಲ್ಲಿ ಕಣ್ಣಿಟ್ಟು, ನಿಮ್ಮ ಮುಖ ನೋಡಿ ಮಾತನಾಡುವ ಹುಡುಗನೇ ಬೇಕು.

★ ಒಳ್ಳೆಯ ಪುಸ್ತಕವನ್ನು ಓದುವಂಥ ಅಭಿರುಚಿ, ಕುತೂಹಲ ಇರಬೇಕು.

★ ತಾನು ಇರುವುದಕ್ಕಿಂತ ಹೆಚ್ಚು ಬುದ್ಧಿವಂತ, ಸ್ಫುರದ್ರೂಪಿ ಎಂದು ತೋರಿಸುವ ಆಡಂಬರ, ಆತ್ಮರತಿ ಕೂಡದು.

★ ಸತ್ಯ ಹೇಳುವ ಧೈರ್ಯವಿರಬೇಕು. ಅದರಿಂದಾಗಿ ಬರುವ ತೊಂದರೆಗಳನ್ನು ಎದುರಿಸುವ ಮನೋಃಸ್ಥೈರ್ಯ ಬೆಳೆಸಿಕೊಳ್ಳಬೇಕು.

★ ಎಲ್ಲರೂ ಅವನ ಸ್ನೇಹ ಬಯಸುವಂತಿರಬೇಕು.

★ ತಾನು ಕಳಪೆ ಎಂಬ ಆತ್ಮಗ್ಲಾನಿ ಬೇಡ.

★ ಈ ಹುಡುಗನಿದ್ದಲ್ಲಿ ಖುಷಿಯ ವಾತಾವರಣ, ಗೆಲುವಿನ ಕಳೆ, ಆತ್ಮೀಯತೆಯ ಸೆಳಕು ಇರಬೇಕು.

★ ಈ ಹುಡುಗ ಬೇಕಾಗಿದ್ದಾನೆ. ಅವನು ನಮ್ಮ ಶಾಲೆಗೆ ಬೇಕು. ಅವನ ಹೆತ್ತವರಿಗೆ ಬೇಕು. ಅವನ ಸಹಪಾಠಿಗಳಿಗೂ ಅವನೇ ಬೇಕು. ಗೆಳೆಯರಿಗೂ ಅವನೇ ಬೇಕು. ಅವನು ಇಲ್ಲವಾದರೆ ಏನೋ ಕಳೆದುಕೊಂಡಿದ್ದೇವೆ ಎಂಬ ಭಾವನೆ ಬರುವಂತಿರಬೇಕು.

★ ಇಂಥ ಹುಡುಗ ನಮ್ಮ ಶಾಲೆಗೆ ಕೂಡಲೇ ಬರಬೇಕು.

(ಇದರಲ್ಲಿ ಲಿಂಗಭೇದ ಇಲ್ಲ)



# ಗುಹೆ

ಗ್ರೀಸ್‌ನ ದಾರ್ಶನಿಕ ತತ್ವಜ್ಞಾನಿ ಪ್ಲೇಟೋ (ಕ್ರಿ.ಪೂ. 427-348) ತನ್ನ ಜೀವನ ಹಾಗೂ ರಾಜಕೀಯ ಸಿದ್ಧಾಂತಗಳನ್ನು ಒಂದು ರೂಪಕದಲ್ಲಿ ಹೇಳುತ್ತಿದ್ದನು. ಪಾಶ್ಚಾತ್ಯ ಚಿಂತನೆಯೆಲ್ಲ ಇದರ ಮೇಲೆ ಅವಲಂಬಿಸಿದೆ. ಅದುವೆ ಪ್ಲೇಟೊ ತನ್ನ 'ರಿಪಬ್ಲಿಕ್' ನಲ್ಲಿ ವರ್ಣಿಸುವ ಉಪಮಾನ ರೂಪಕ ಗುಹೆ.

ಗ್ರೀಸ್‌ನಲ್ಲಿ ಪ್ರಜಾಪ್ರಭುತ್ವ ಅತ್ಯಂತ ತುರೀಯಾವಸ್ಥೆಯಲ್ಲಿದ್ದ ಕಾಲವದು. ಬಹುಮತ ಎಂಬುದು ಗಣತಂತ್ರದ ಶಕ್ತಿಯೂ ಹೌದು. ದೌರ್ಬಲ್ಯವೂ ಹೌದು. ಅದರಲ್ಲಿ ಸೋಕ್ರೆಟೀಸ್‌ನಂಥ ಮಹಾನ್ ತತ್ವಜ್ಞಾನಿಯೂ ಬಲಿಯಾಗಬೇಕಾಗುತ್ತದೆ. ಆ ನ್ಯಾಯಮಂಡಳಿಯಲ್ಲಿ ಪ್ಲೇಟೋ ಇದ್ದರೂ ಸೋಕ್ರೆಟೀಸ್‌ನನ್ನು ಉಳಿಸಲಾಗುವುದಿಲ್ಲ. ಹಲವರು ಕೂಡಿ ಆಳುವಾಗ ರಾಜ್ಯಕ್ಕೆ ಯಾವುದು ಒಳ್ಳೆಯದು ಎಂದು ತೀರ್ಮಾನ ಮಾಡಲಿಕ್ಕೆ ಆಗುವುದಿಲ್ಲ ಎಂಬ ತಿಳಿವಳಿಕೆ ಪ್ಲೇಟೋನಲ್ಲಿ ಮೂಡುತ್ತದೆ. ಅದರ ಫಲವೇ ಈ ಗುಹೆಯ ರೂಪಕ.

ಈ ಜೀವನ ಎಂಬುದು ಒಂದು ಗುಹೆ. ಭೂತಳದಲ್ಲಿ, ಒಂದು ಕಡೆ ಮಾತ್ರ ಬೆಳಕು ಕಾಣಿಸುವ ಈ ಗುಹೆಯಲ್ಲಿ ಮಾನವನ ಕೈ ಕಾಲು, ಕುತ್ತಿಗೆಗಳಿಗೆ ಸರಪಳಿ ಕಟ್ಟಿದ್ದಾರೆ. ಅವರು ಚಲಿಸುವಂತಿಲ್ಲ. ಬೆಳಕಿನ ಕಿರಣಗಳನ್ನು ಕಾಣುವಂತಿಲ್ಲ. ಅವರು ಕಾಣುವುದು ಬರೀ ಗುಹೆಯಲ್ಲಿ ಇರುವ ಬೆಂಕಿ. ಅದರ ಬಳಿ ನಡೆದಾಡುವ ನೆರಳುಗಳು. ಅವು ಗುಹೆಯ ಗೋಡೆಯ ಮೇಲೆ ಬಿದ್ದಾಗ ವಿಕಾರವಾಗಿ ಕಾಣಿಸುತ್ತವೆ. ಹೀಗೆ ಕೈದಿಗಳು ನೋಡುವುದು ನೆರಳುಗಳನ್ನು, ಕೇಳುವುದು ಪ್ರತಿಧ್ವನಿಗಳ ಪಿಸುಗುಟ್ಟುವಿಕೆಯನ್ನು. ಅದುವೇ ನಿಜವೆಂದು ಅವರು ಭ್ರಮೆಗೊಂಡು ಆ ನಂಬಿಕೆಯಿಂದಲೇ ಜೀವನ ಸಾಗಿಸುತ್ತಾರೆ.

ಈ ಕೈದಿಗಳಲ್ಲಿ ಒಬ್ಬನಾದರೂ ಹೊರಗೆ ಬಂದು ಬೆಳಕಿನ ಕಿರಣಗಳನ್ನು ಕಂಡು ನಿಜಸ್ಥಿತಿಯನ್ನು ತಿಳಿಯುವಂತಾದರೆ? ಆದರೆ ಜೀವನದಲ್ಲಿ ಎಷ್ಟು ಮಂದಿ ಬೆಳಕು ಕಾಣಲು ಪ್ರಯತ್ನಿಸುತ್ತಾರೆ?

ಸರಿಯಾಗಿ ಯೋಚನೆ ಮಾಡಿದರೆ ನಾವೆಲ್ಲ ಈ ಕತ್ತಲೆಯ ಗುಹೆಯಲ್ಲಿ ತಡಕಾಡುವುದನ್ನೇ ನಮ್ಮ ದಿನಚರಿ ಮಾಡಿಕೊಂಡಿದ್ದೇವೆ. ಬೆಳಕಿನ ಬಗ್ಗೆ ಚಿತ್ರವಿಚಿತ್ರ ಪೂರ್ವಗ್ರಹಗಳನ್ನು ಬೆಳೆಸಿಕೊಂಡಿದ್ದೇವೆ. ಅದರಲ್ಲಿ ನಾವೇ ಬಂದಿಗಳಾಗಿದ್ದೇವೆ. ಮೇಲಿಂದ ಮೇಲೆ ಮಾತ್ರ ತಿಳಿದುಕೊಳ್ಳಲು ಪ್ರಯತ್ನಿಸುತ್ತೇವೆ. ಆಳಕ್ಕಿಳಿದು ಸತ್ತ್ವ ಕಂಡು ಹುಡುಕುವವರು ತೀರಾ ವಿರಳ. ಆ ದೃಷ್ಟಿಯಿಂದ ನಾವೆಲ್ಲ ಭ್ರಮಾಧೀನರಾಗಿರುತ್ತೇವೆ.

ಗುಹೆಯ ಸಂಕೇತ ನಮ್ಮ ವೈಜ್ಞಾನಿಕ ಮನೋಭಾವವನ್ನು ಹೇಳುತ್ತದೆ. ಮುಕ್ತವಾಗಿ ಚಿಂತನೆ ಮಾಡುವ ಬದಲು ಇದಮಿತ್ಥಂ ಎಂದು ತೀರ್ಮಾನಕ್ಕೆ ಬಂದು ಅದುವೆ ಸತ್ಯ ಎಂಬ ಧಿಢೀರ್ ತೀರ್ಮಾನಕ್ಕೆ ಬರುತ್ತೇವೆ. ನಮಗೆ ತಿಳಿಯದುದು ಮೂಢ ನಂಬಿಕೆ ಎನ್ನುತ್ತೇವೆ. ನಿಜವಾದ ಸತ್ಯ ಶೋಧನೆ ಅಲ್ಲಿ ಇಲ್ಲವೇ ಇಲ್ಲ.

ರಾಜಕೀಯ ಜೀವನಕ್ಕೂ ಈ ಗುಹೆಯೇ ಸಂಕೇತ. ನಾಯಕರು ಹಾಗೂ ಪ್ರಜೆಗಳು ಕತ್ತಲೆಯಲ್ಲೇ ತೊಳಲಾಡುತ್ತಿದ್ದಾರೆ. ಸ್ವಾರ್ಥ, ಅಧಿಕಾರ, ಮಹತ್ವಾಕಾಂಕ್ಷೆ, ಭ್ರಷ್ಟಾಚಾರ, ಅಜ್ಞಾನ, ಸಮೂಹ ಸನ್ನಿ (ಬಹುಮತದ ಗೊಂದಲ), ವಿವೇಕದ ಧ್ವನಿಗೆ ಬೆಲೆ ಇಲ್ಲದಿರುವುದು - ಇವೆಲ್ಲ ಇಂದಿಗೂ ನಮ್ಮ ರಾಜಕೀಯ ಕ್ಷೇತ್ರದ ಚಿತ್ರಣವನ್ನೇ ಕೊಡುತ್ತದೆ.

ಈ ಗುಹೆ ಸ್ಥಿತಪ್ರಜ್ಞ ರಾಜನಿಗೂ ಸಂಕೇತ. ಸುಖ-ದುಃಖಗಳನ್ನು ಸಮಾನವಾಗಿ ಕಂಡು, ಬೆಳಕನ್ನು ಕಂಡು ಹಿಡಿಯಲು ಹೊರಬರುವವರೇ ನಾಯಕರು. ಇತಿಹಾಸದಲ್ಲಿ ಆ ರೀತಿ ಬೆಳಕು ಕಂಡ ಹಾಗೂ ಇತರರಿಗೆ ಕಾಣಿಸಿದ ನಾಯಕರು ಬೆರಳೆಣಿಕೆಯಷ್ಟು.

ಈ ಗುಹೆ ಜೀವನದ ಆಸೆ ನಿರಾಸೆಗಳಿಗೆ ಸಂಕೇತ. ಸಾಹಸ, ಮೌಲ್ಯ, ಜೀವನ ನಡೆಸುವ ರೀತಿ ಎಲ್ಲದಕ್ಕೂ ಕನ್ನಡಿ ಹಿಡಿಯುತ್ತದೆ.

ಸಾವು ನಿರಂತರ ಬದ್ಧತೆಯ, ನೆರಳುಗಳನ್ನೇ ನೋಡುವ ಜೀವನವನ್ನು ಅನುಸರಿಸಬೇಕೆ? ಬೆಳಕು ಕಾಣಲು ಪ್ರಯತ್ನಿಸಿ, ಮುಕ್ತ ವಿಚಾರ, ಮೌಲ್ಯಗಳ ಬದುಕನ್ನು ಮಾಡಬೇಕೆ? ಎಷ್ಟು ಮಂದಿಗೆ ಇಂಥ ಆತ್ಮವಿಮರ್ಶೆ ಮಾಡುವ ಪ್ರಬುದ್ಧತೆ ಇದೆ ?



# ಪರಿವರ್ತನೆ

**ಮ**ನಸ್ಸನ್ನು ನಮಗೆ ಬೇಕಾದಂತೆ ರೂಪಿಸಿಕೊಳ್ಳಬಹುದು. ಅದುವೆ ಜೀವನದ ಮುಖ್ಯ ಕಾರ್ಯ. ಅದೇ ನಿಜವಾದ ತಪಸ್ಸು.

ಮತ್ಸರ, ಸ್ವಾರ್ಥ, ಅಧಿಕಾರಲಾಲಸೆ, ಇನ್ನೊಬ್ಬರ ಸೊತ್ತಿಗೆ ಆಸೆಪಡುವುದು, ಅಹಂಕಾರ - ಇವೆಲ್ಲ ಮನಸ್ಸಿನ ಹಲವು ಹತ್ತು ವಿಕಾರಗಳು. ಇವನ್ನು ಮೀರುವುದು, ಗೆಲ್ಲುವುದು, ನಿಜವಾದ ಸಾಧನೆ. ಅದನ್ನು ಹೇಗೆ ಮಾಡಬಹುದು? ಈ ಬಗ್ಗೆ ಮಹಾರಾಷ್ಟ್ರದ ಸಂತ ಶ್ರೇಷ್ಠ ತುಕಾರಾಮನ ಜೀವನದ ಎರಡು ಘಟನೆಗಳೇ ಯೋಗ್ಯ ಉದಾಹರಣೆ.

ಸಂತ-ಕವಿ ತುಕಾರಾಮ ಅಂದರೆ ಸಾತ್ವಿಕ, ಭೋಳೆ ಸ್ವಭಾವಕ್ಕೆ ಪರ್ಯಾಯ ಹೆಸರು. ಜಗತ್ತನ್ನೆಲ್ಲ ಮರೆತು ರಾತ್ರಿ-ಹಗಲು ಅವನು ವಿಠಲ-ವಿಠಲ ಎಂದು ನಾಮಸ್ಮರಣೆಯಲ್ಲೇ ಇರುತ್ತಿದ್ದ. ವಿಚಿತ್ರವೆಂದರೆ ಇಂಥ ಭೋಳೆ ತುಕಾರಾಮನ ಮೇಲೂ ಹೊಟ್ಟೆಕಿಚ್ಚು ಪಡುವವರಿದ್ದರು!

ಅವನೇ ಮಂಬಾಜಿ ಬುವಾ. ಜನರೆಲ್ಲರೂ ಬಂದು ತುಕಾರಾಮನ ಹರಿಕಥೆ ಕೇಳುತ್ತಾರೆ. ಮಂತ್ರಮುಗ್ಧರಾಗುತ್ತಾರೆ. ಅವನ ಕಾಲಿಗೆ ಎರಗುತ್ತಾರೆ. ಅವನಿಗೆ ತುಂಬ ಗೌರವ ಕೊಡುತ್ತಾರೆ. ಇದನ್ನೆಲ್ಲ ಮಂಬಾಜಿಗೆ ಸಹಿಸಲಿಕ್ಕೆ ಆಗಲಿಲ್ಲ. ಆತ್ಮೀಯನಂತೆ ತೋರಿಸುತ್ತ ತುಕಾರಾಮನನ್ನು ಎಲ್ಲರೆದುರಿಗೆ ಒಮ್ಮೆ ಮುಖಭಂಗ ಮಾಡಿ ಅವಮಾನ ಮಾಡಬೇಕೆಂದು ಮಂಬಾಜಿ ಸಮಯ ಕಾಯುತ್ತಿದ್ದ.

ಒಮ್ಮೆ ತನ್ನಿಂದ ತಾನೇ ಅಂಥ ಅವಕಾಶ ಅನಾಯಾಸವಾಗಿ ಒದಗಿ ಬಂತು. ಅದೊಂದು ದಿನ ಈ ಮಂಬಾಜಿ ಸಾಹುಕಾರನ ತೋಟದಲ್ಲಿ ತುಕಾರಾಮನ ಎಮ್ಮೆ ನುಗ್ಗಿ ಗಿಡಗಳನ್ನೆಲ್ಲ ಹಾಳುಗೆಡವಿ, ನುಜ್ಜುಗುಜ್ಜು ಮಾಡಿತು. ಮಂಬಾಜಿಗೆ ಖುಷಿಯೂ ಆಯಿತು. ಕೋಪವೂ ಬಂತು. ತುಕಾರಾಮನಿಗೆ ಬುದ್ಧಿಕಲಿಸಲು ಒಳ್ಳೆಯ ಅವಕಾಶ ಸಿಕ್ಕಿತು ಎಂದು ಹಿಗ್ಗಿದ. ಆ ಎಮ್ಮೆಯನ್ನು ಬಾರುಕೋಲಿನಿಂದ ಚೆನ್ನಾಗಿ ಬಡಿದು ತುಕಾರಾಮನ

ಮೇಲಿನ ಕೋಪವನ್ನು ತುಸು ತೀರಿಸಿಕೊಂಡ. ಇನ್ನೇನು, ತುಕಾರಾಮ ಬಂದು ತನಗೆ ಬೈಗಳನ್ನು ಕೊಟ್ಟು ಜಗಳ ಮಾಡುತ್ತಾನೆಂದು ಮಂಬಾಜಿ ನಿರೀಕ್ಷಿಸಿದ್ದ. ಆದರೆ ತುಕಾರಾಮ ತನ್ನ ಎಮ್ಮೆಯೊಂದಿಗೆ ಅತ್ಯಂತ ಶಾಂತ ರೀತಿಯಲ್ಲಿ ಬಂದು, ಮಂಬಾಜಿಯ ಕ್ಷಮಾಯಾಚನೆ ಮಾಡಿದ. ತುಕಾರಾಮನ ಮೇಲೆ ಕೋಪ ಮಾಡಲು ಮಂಬಾಜಿಗೆ ಅವಕಾಶವೇ ಆಗಲಿಲ್ಲ. ಅವನು ಒಳಗೊಳಗೇ ಬೇಯುತ್ತಿದ್ದ.

ಇನ್ನೊಂದು ದಿನ ತುಕಾರಾಮನು ಪ್ರತಿನಿತ್ಯ ಹೋಗುವ ದಾರಿಯ ತುಂಬ ಮುಳ್ಳಿನ ಗಿಡಗಳನ್ನು ಹಾಕಿ ಬಿಟ್ಟ ಮಂಬಾಜಿ. ಈ ಸಂಚು ತುಕಾರಾಮನಿಗೆ ಪಾಪ ತಿಳಿಯಲೇ ಇಲ್ಲ. ಅವನು ಎಂದಿನಂತೆ ಆ ದಾರಿಯಾಗಿ ಬರುವಾಗ ಇದ್ದ ಮುಳ್ಳಿನ ಗಿಡಗಳನ್ನೆಲ್ಲ ತೆಗೆದು ಪಕ್ಕದಲ್ಲಿಟ್ಟ. ಅವನ ತಾಳ್ಮೆ, ಶಾಂತ ಮನಸ್ಸು ನೋಡಿ ಮಂಬಾಜಿ ವಿಪರೀತ ಉದ್ರೇಕಿತನಾದ. ತುಕಾರಾಮನನ್ನು ದರದರನೆ ತನ್ನ ಮನೆಗೆ ಎಳೆದುಕೊಂಡು ಹೋಗಿ ಆ ಮುಳ್ಳಿನ ಗಿಡಗಳ ಗೆಲ್ಲುಗಳಿಂದಲೇ ಎಮ್ಮೆಗೆ ಬಡಿದಂತೆ ಬಡಿದ. ರಕ್ತ ಸೋರತೊಡಗಿತು. ತುಕಾರಾಮ ಹಾಂ-ಹೂಂ ಅನ್ನದೆ ಎಲ್ಲವನ್ನೂ ಶಾಂತಿಯಿಂದ ಸಹಿಸಿಕೊಂಡ. ಬಡಿದು ಬಡಿದು ಮಂಬಾಜಿಗೇ ಸಾಕಾಯಿತು. ಅವನಿಗೇ ಮೈ ಕೈ ನೋವು ಉಂಟಾಗಿ ಸೆಳೆತ ಬಂತು. ಮರುದಿನ ತುಕಾರಾಮನಿಗೆ ಇದು ತಿಳಿದು ಅವನು ಮಂಬಾಜಿ ಇದ್ದಲ್ಲಿ ಬಂದು ಅವನಿಗೆ ನೋವಿನ ಎಣ್ಣೆ ಹಚ್ಚಲಾರಂಭ ಮಾಡಿದ. ವಿಠಲನಲ್ಲಿ ಪೂರ್ಣ ತಲ್ಲೀನನಾದ ತುಕಾರಾಮನಿಗೆ ನೋವಿನ ಅನುಭವವೂ ಆಗಲಿಲ್ಲ. ಕೋಪವೂ ಬರಲಿಲ್ಲ. ಮಂಬಾಜಿಯ ರಸ್ತೆಯಲ್ಲಿ ನಡೆದು ಅವನಿಗೆ ತೊಂದರೆ ಮಾಡಿದುದಕ್ಕೆ ತುಕಾರಾಮ ಅವನ ಕ್ಷಮಾಪಣೆಯನ್ನೇ ಕೇಳಿದ. ಎರಡು ದಿನ ಅವನಿಗೆ ಎಣ್ಣೆ ಮಾಲೀಸು ಮಾಡಿದ. ಮಂಬಾಜಿ ಕರಗಿ ಹೋದ. ತುಕಾರಾಮನ ಕಾಲಿಗೆರಗಿದ. ತುಕಾರಾಮ ಪ್ರೇಮ, ವಾತ್ಸಲ್ಯ, ಮಮತೆ, ವಿಶ್ವಾಸದಿಂದ ಮಂಬಾಜಿಯನ್ನು ಗೆದ್ದುಕೊಂಡ. ಮಂಬಾಜಿಯ ಹೃದಯ ಪರಿವರ್ತನೆಯಾಗಿತ್ತು.



# ಸುಖ

ಎಲ್ಲರೂ ಸುಖವನ್ನೇ ಬಯಸುತ್ತಾರೆ. ಆದರೆ ಅದಕ್ಕೆ ತಕ್ಕುದಾದ ಮನೋಭಾವವನ್ನು ಬೆಳೆಸಿಕೊಳ್ಳುತ್ತಾರೆಯೆ?

ತಾನು ಮಾತ್ರ ಸುಖಿಯಾದರೆ ಸಾಕು. ತನ್ನೊಂದಿಗೆ ತನ್ನ ಹೆಂಡತಿ ಮಕ್ಕಳು, ಇತರರು ಹೇಗೆ ಬೇಕಾದರೂ ಇರಲಿ. ತನಗೇನು? ಇದೂ ಒಂದು ಮನೋಭಾವ. ಇದು ತಾಮಸ.

''ಯಾರು ಇತರರ ಸುಖದಲ್ಲೇ ತನ್ನ ಸುಖವನ್ನು ಕಾಣುತ್ತಾರೆಯೋ ಅವರೇ ನಿಜವಾದ ಸುಖಿಗಳು. ಅದೇ ನಿಜವಾದ ಬದುಕು'' ಎಂದು ಸ್ವಾಮಿ ವಿವೇಕಾನಂದರು ಅನೇಕ ಬಾರಿ ಹೇಳಿದ್ದರು. ಅದೇ ಸಾತ್ವಿಕ ಸುಖ.

ಇತರರಿಗೆ ತೊಂದರೆ ಕೊಟ್ಟಾದರೂ ಸರಿ, ತಾನು ಸುಖ ಪಡೆಯಬೇಕು ಎಂಬ ರಾಕ್ಷಸೀ ಮನೋಭಾವದವರಿದ್ದಾರೆ. ಇನ್ನೊಬ್ಬರ ನೋವಿನಲ್ಲಿ ತಾನು ಆನಂದ ಪಡೆಯಬೇಕು ಎನ್ನುವವರೂ ಇರುತ್ತಾರೆ. ಇಂಥ 'ಸುಖಿ' ಗಳ ಸಂಖ್ಯೆ ಜಾಸ್ತಿಯಾಗುವುದೇ ಅಪಾಯಕರ. ಇದು ರಾಜಸಿಕ.

ಸುಖ ಎಂಬುದು ಕೇವಲ ಭೌತಿಕ, ದೈಹಿಕ ಅಥವಾ ಸ್ವಾರ್ಥದ ಸುಖ ಎಂದಿಗೂ ಆಗಲಾರದು. ಅಂಥ ಸಂಕುಚಿತ ಕಲ್ಪನೆಯಲ್ಲಿ ಸುಖ ಇರುವುದಿಲ್ಲ.

ಸುಖ ಎಂಬುದು ಮನಸ್ಸಿನ ಒಂದು ಉತ್ತುಂಗ ಸ್ಥಿತಿ. ಅದೊಂದು ಮನೋಧರ್ಮ. ಅದೊಂದು ಮನಸ್ಸಿನ ತಯಾರಿ, ಸಮತೋಲ, ಸಿದ್ಧತೆ, ಮನಸ್ಸಿನ ಪರಿಪಕ್ವತೆ.

ದಟ್ಟದರಿದ್ರ ದಂಪತಿಗಳಲ್ಲಿ ಇಬ್ಬರು ವಿದೇಶೀಯರು ಬಂದರು. ದಂಪತಿಗಳ ಮುಖದಲ್ಲಿ ಲವಲವಿಕೆ, ಖುಷಿ ಎದ್ದು ಕಾಣುತ್ತಿತ್ತು. ನೆಮ್ಮದಿ ಇತ್ತು. ಹೊರಗಡೆ ಏನೂ ಇರಲಿಲ್ಲ. ಆದರೆ ಒಳಗಡೆ ಎಲ್ಲವೂ ಇದ್ದವು.

ಇಂಥ ದಾರಿದ್ರ್ಯದ ನಡುವೆಯೂ ಇವರು ಹೇಗೆ ಇಷ್ಟು ಸಂತೋಷವಾಗಿರುತ್ತಾರೆ? ಆ ವಿದೇಶೀಯರಿಗೆ ಆಶ್ಚರ್ಯ. ಸಮಸ್ಯೆ.

ಶ್ರೀಮಂತಿಕೆಗೂ ಸುಖಕ್ಕೂ ಸಂಬಂಧ ಕಡಿಮೆ. ಜಗತ್ತಿನ ಎಷ್ಟು ಮಂದಿ ಶ್ರೀಮಂತರು ಸುಖವಾಗಿದ್ದಾರೆ ? ಎಂದು ಕೇಳಿ ನೋಡಿ. ಬಡವರೂ ಸುಖಿಗಳಾಗಿರಬಹುದು.



ಅದೆಲ್ಲ ಮನೋವ್ಯಾಪಾರದ ಕತೆ-ವ್ಯಥೆ. ಆಸೆ-ದುರಾಸೆ, ಮತ್ಸರ, ಸೇಡು, ಕೋಪಗಳಿದ್ದವರು ಎಂದೂ ಸುಖಿಗಳಾಗಲಾರರು. ಇವು ಸುಖವನ್ನು ಹೀರಿ ಮನುಷ್ಯನನ್ನು ಹಿಂಡಿ ಹಿಪ್ಪೆ ಮಾಡಿಬಿಡುತ್ತವೆ.

ಇದ್ದುದರಲ್ಲಿ ನೆಮ್ಮದಿಯಾಗಿದ್ದವರನ್ನು ನಾವು ಕಾಣುತ್ತೇವೆ. ಎಲ್ಲಿಂದ, ಹೇಗೆ ಬಂತು ಆ ಸ್ಥಿತಿ?

ಇತರರಿಗೆ ಸುಖ ಕೊಡುವುದೇ ನಿಜವಾದ ಸುಖ. ಬದುಕಿನಲ್ಲಿ ಹಂಚಿ ತಿನ್ನುವುದೇ ಸುಖ. ಕೊಟ್ಟದ್ದು ತನಗೆ, ಬಚ್ಚಿಟ್ಟದ್ದು, ಪರರಿಗೆ. ಈ ತಿಳಿವಳಿಕೆಯೇ ಸುಖ. ಇನ್ನೊಬ್ಬರಿಗೆ ಕೊಟ್ಟಾಗ ಆಗುವಷ್ಟು ಸುಖ, ಪಡೆದುಕೊಂಡಾಗ ಆಗುತ್ತದೆಯೇ?

ತಿಳಿದವರೊಬ್ಬರು ಹೇಳುತ್ತಾರೆ - ''ದೇನಾ ಬ್ಯಾಂಕ್ ಆಗಬೇಕು. ಲೇನಾ ಬ್ಯಾಂಕ್ ಬೇಡ''

ನಮ್ಮ ಹಿರಿಯರು ಭಗವಂತನಲ್ಲಿ ತನಗಾಗಿ ಬೇಡಿಕೊಳ್ಳಲಿಲ್ಲ. 'ಲೋಕಾಃ ಸಮಸ್ತಾಃ ಸುಖಿನೋ ಭವಂತು'' ಎಂದು ಪ್ರಾರ್ಥಿಸಿದರು.

ಆ ಪ್ರಾರ್ಥನೆಯಲ್ಲೂ ಉದಾತ್ತಭಾವ, ಔದಾರ್ಯ. ಅದೇ ಸುಖದ ಮೂಲ.

❀❀❀



# ಮಾರ್ಮಿಕ ನಗು

**ಕು**ರುಕ್ಷೇತ್ರ ಯುದ್ಧ ಮುಗಿದು ಪಾಂಡವರ ಆಳ್ವಿಕೆ ಆರಂಭವಾಯಿತು. ಆದರೆ ಧರ್ಮರಾಜ ಪಶ್ಚಾತ್ತಾಪ ಮತ್ತು ದುಃಖದಿಂದ ಬೆಂದು ಹೋಗಿದ್ದ. ತನ್ನ ಬಂಧು, ಬಳಗ, ಮಿತ್ರ, ಗುರುಹಿರಿಯರನ್ನೆಲ್ಲ ಕೊಂದು ಈ ರಾಜ್ಯ ಪಡೆಯಬೇಕಿತ್ತೆ? - ಎಂದು ಪ್ರತಿಕ್ಷಣ ಹಲುಬುತ್ತಿದ್ದ. ಈ ಪಾಪವನ್ನು ತಾನು ಹೇಗೆ ತೊಳೆದುಕೊಳ್ಳಬಹುದು ಎಂದು ಶ್ರೀಕೃಷ್ಣನಲ್ಲಿ ಬಿನ್ನವಿಸಿಕೊಂಡ.

ಶ್ರೀಕೃಷ್ಣ ಪಂಚಪಾಂಡವರನ್ನು ಮತ್ತು ದ್ರೌಪದಿಯನ್ನು ಕುರುಕ್ಷೇತ್ರದಲ್ಲಿ ಶರಪಂಜರದ ಮೇಲೆ ಮಲಗಿ, ಉತ್ತರಾಯಣದ ನಿರೀಕ್ಷೆಯಲ್ಲಿದ್ದ ಭೀಷ್ಮಪಿತಾಮಹನಲ್ಲಿ ಕರೆದುಕೊಂಡು ಹೋದ. ಧರ್ಮರಾಜನಿಗೆ ಭೀಷ್ಮಾಚಾರ್ಯರು ಬುದ್ಧಿವಾದ ಹೇಳಬೇಕು ಎಂಬುದೇ ಶ್ರೀಕೃಷ್ಣನ ಆಸೆಯಾಗಿತ್ತು.

ಭೀಷ್ಮಾಚಾರ್ಯರು ಧರ್ಮರಾಜ ಮತ್ತು ಸಹೋದರರಿಗೆ ರಾಜಧರ್ಮ, ಮೋಕ್ಷಧರ್ಮ, ಬದುಕಿನ ಮೌಲ್ಯಗಳ ಬಗ್ಗೆ ದೀರ್ಘವಾಗಿ ಉಪದೇಶ ಕೊಡಲಾರಂಭಿಸಿದರು. ಭೀಷ್ಮಾಚಾರ್ಯರು ಮಾತನಾಡುತ್ತಲೇ ಇರುವಾಗ, ಗಂಭೀರವಾಗಿ ಉಪದೇಶ ಕೊಡುವಾಗ ನಡುವೆ ದ್ರೌಪದಿಯು ಕಿಸಕ್ಕನೆ ನಕ್ಕಳು. ಅಲ್ಲಿ ನಿರ್ಮಾಣವಾದ ಒಂದು ಪ್ರಸನ್ನತೆಯ ಕಳೆಗೆ ರಸಭಂಗವಾಯಿತು.

ದ್ರೌಪದಿ ಏಕೆ ನಕ್ಕಳು? ಗಂಭೀರ ವಾತಾವರಣದಲ್ಲಿ ಹಾಗೆ ಅಸಭ್ಯವಾಗಿ ನಗುವುದು ಸರಿಯೆ? ಎಲ್ಲರಿಗೂ ಒಂದು ರೀತಿಯ ಮುಜುಗರವಾಯಿತು.

ದ್ರೌಪದಿ ಹಾಗೆ ಕಾರಣವಿಲ್ಲದೆ ನಗಲಾರಳು. ಆದರೆ ಅವಳು ನಕ್ಕ ಕಾರಣ ಯಾರಿಗೂ ಅರ್ಥವಾಗಿರಲಿಲ್ಲ. ಭೀಷ್ಮಾಚಾರ್ಯರೂ

ದ್ರೌಪದಿಯನ್ನು ಒತ್ತಾಯಿಸಿ, ನಗುವಿನ ಕಾರಣ ಹೇಳುವಂತೆ ಕೇಳಿಕೊಂಡರು. ದ್ರೌಪದಿ ಹೇಳಿದಳು :

''ನಿಜವಾದ ಕಾರಣ ಹೇಳಿದರೆ ನೀವು ಕೋಪಮಾಡಬಾರದು ಅಜ್ಜಯ್ಯ ; ಸರಿಯೆ?''

ತಾನು ಕೋಪ ಮಾಡಿಕೊಳ್ಳುವುದಿಲ್ಲವೆಂದು ಭೀಷ್ಮಾಚಾರ್ಯರು ಮಾತುಕೊಟ್ಟರು. ''ಸದ್ಯದಲ್ಲೇ ದೇಹವನ್ನು ಬಿಡುವ ನನಗೆ ಕೋಪವೇಕೆ? ನಿರ್ಭಯವಾಗಿ ಹೇಳು''

''ಇಂದು ನಿಮ್ಮ ಬಾಯಿಂದ ಬರುತ್ತಿರುವ ಜ್ಞಾನಗಂಗೆಯ ವಿವೇಕಪೂರ್ಣ ಮಾತುಗಳು, ಅಂದು ತುಂಬಿದ ಸಭೆಯಲ್ಲಿ ನನ್ನನ್ನು ವಿವಸ್ತ್ರಳನ್ನಾಗಿ ಮಾಡಿ, ಶೀಲಭಂಗ ಮಾಡುವ ಪ್ರಯತ್ನವನ್ನು ಕೌರವರು ಮಾಡಿದಾಗ ಏಕೆ ಬರಲಿಲ್ಲ? ಕಳವಳದಿಂದ ನಾನು ನಿಮ್ಮಲ್ಲಿ ಬಂದು ಬೇಡಿಕೊಂಡರೂ ಆಗ ನೀವೇಕೆ ಮೂಕರಾದಿರಿ? ನನಗಾಗುತ್ತಿರುವ ಅನ್ಯಾಯವನ್ನು ನಿಲ್ಲಿಸಲು ಅಲ್ಲಿ ನೆರೆದ ನನ್ನ ಗಂಡಂದಿರನ್ನೂ ಕೂಡಿ ಯಾರಿಗೂ ಸಾಧ್ಯವಾಗಲಿಲ್ಲ. ಧರ್ಮಶಾಸ್ತ್ರವನ್ನು ಬಲ್ಲವರೇ ಆಗ ಮೂಕರಾಗಿದ್ದರು. ಅದಕ್ಕಾಗಿ ಇಂದು ನಿಮ್ಮ ಮಾತುಗಳನ್ನು ಕೇಳಿ ನಗು ಬಂತು, ಅಷ್ಟೆ'' ಎಂದಳು ದ್ರೌಪದಿ.

ಎಲ್ಲರೂ ಚಕಿತರಾದರು. ಭೀಷ್ಮಾಚಾರ್ಯರೂ ಸ್ತಬ್ಧರಾದರು. ಅನಂತರ ಹೇಳಿದರು-

''ನೀನು ಹೇಳಿದ್ದೆಲ್ಲ ನಿಜ, ಪಾಂಚಾಲಿ. ಆದರೆ ಆಗ ಆ ಸಂದರ್ಭದಲ್ಲಿ ಧರ್ಮ ನಿರ್ಣಯ ಕೊಡಲು ನಾನು ಅಪಾತ್ರನಾಗಿದ್ದೆ. ದುರ್ಯೋಧನನಂಥ ಭ್ರಷ್ಟನ ಅನ್ನ ತಿಂದು ನನ್ನ ಬುದ್ಧಿ ಭ್ರಮಣೆಯಾಗಿತ್ತು. ಯೋಗ್ಯ ನಿರ್ಣಯ ಕೊಡುವ ನನ್ನ ಯೋಗ್ಯತೆಗೆ ಗ್ರಹಣ ಬಡಿದಿತ್ತು.... ಇಂದು ನಾನು ಎಲ್ಲರಿಂದಲೂ ನಿರ್ಲಿಪ್ತ. ಮುಕ್ತ. ಮನಸ್ಸು ಸ್ವಚ್ಛವಾಗಿದೆ. ಅಂದು ತಾಮಸ ತುಂಬಿತ್ತು. ಇಂದು ಸಾತ್ವಿಕತೆ ಇದೆ.... ನನ್ನನ್ನು ಕ್ಷಮಿಸು, ಮಗಳೇ ....''





# ಕಾಲ

ಎಲ್ಲವನ್ನೂ ಕಾಲವೇ ನಿರ್ಣಯಿಸುತ್ತದೆ. ಎಲ್ಲವನ್ನೂ ಕಾಲವೇ ಸ್ವಾಹಾ ಮಾಡುತ್ತದೆ.

ಚಾಣಕ್ಯ ತನ್ನ 'ನೀತಿಸೂತ್ರ' ದಲ್ಲಿ ಹೇಳುತ್ತಾನೆ -

ಕಾಲವಿತ್ ಕಾರ್ಯಂ ಸಾಧಯೇತ್

ಕಾಲದ ತಿಳಿವಳಿಕೆಯುಳ್ಳವನು ಕಾರ್ಯವನ್ನು ಸಾಧಿಸಬೇಕು.

ಕಾಲ ಮೀರಿದರೆ ಕಾಲವೇ ಕಾರ್ಯದ ಫಲವನ್ನು ಕುಡಿದು ಬಿಡುತ್ತದೆ. (ಕಾಲಾತಿಕ್ರಮಾತ್ ಕಾಲ ಏವ ಫಲಂ ಪಿಬತಿ-ಚಾಣಕ್ಯ). ಕಾಲಕ್ಕೆ ಸರಿಯಾಗಿ ಮಾಡದ ಕೆಲಸ ಕೆಟ್ಟು ಹೋಗುತ್ತದೆ. ನಷ್ಟವಾಗುತ್ತದೆ. ಆದರಿಂದ ದುಃಖ ಉಂಟಾಗುತ್ತದೆ.

ಭಾರತೀಯ ದಾರ್ಶನಿಕರು ಕಾಲವನ್ನು ಒಂದು ಚಕ್ರದ ಆವರ್ತನೆಗೆ ಹೋಲಿಸಿದ್ದಾರೆ. ಕಾಲಚಕ್ರ ತಿರುಗುತ್ತಲೇ ಇರುತ್ತದೆ. ಪ್ರತಿಯೊಬ್ಬನ ಬದುಕಿನಲ್ಲೂ ಒಳ್ಳೆಯ ಕಾಲ, ಕೆಟ್ಟ ಕಾಲಗಳೂ ಬರುತ್ತವೆ. ಕೆಳಗೆ ಇದ್ದದ್ದು ಮೇಲೆ ಸರಿಯುತ್ತದೆ. ಮೇಲಿದ್ದುದು ಕೆಳಗೆ ಜಾರುತ್ತದೆ. ಏಳುಬೀಳುಗಳು ಪ್ರಕೃತಿ ಸಹಜ - ಕಾಲ ಧರ್ಮ.

ಆಧುನಿಕ ವಿಚಾರದಲ್ಲಿ ಕಾಲದ ವ್ಯವಸ್ಥೆ (Time Management) ಬಹಳ ಮುಖ್ಯವಾದುದು ಎನ್ನುತ್ತಾರೆ. ಸಮಯ ಕ್ಲಪ್ತತೆಯ ಶಿಸ್ತು, ಒಳ್ಳೆಯ ಗುಣ, ಆ ಶಿಸ್ತಿನಿಂದ ಕಾರ್ಯಗಳು ಬೇಗ ಕೈಗೂಡುತ್ತವೆ.

ಕಾಲಕ್ಕೆ ಸರಿಯಾಗಿ ಮಾಡುವ ಕೆಲಸ ಸರಿಯಾಗುತ್ತದೆ. ಕಾಲ ಮೀರಿದರೆ ಉಗುರಿನಿಂದ ಚಿವುಟಿ ಹಾಕುವಂಥ ಕೆಲಸಕ್ಕೆ ಕೊಡಲಿ ಬೇಕಾಗಬಹುದು. ಅಷ್ಟಿದ್ದರೂ ಕೆಲಸ ಆಗದೇ ಇರಬಹುದು.

ಕಾಲ ನಿಯಮವಿಲ್ಲದ ಕೆಲಸ ಸಾವಿಗೆ ಸಮ ಎಂದು ಸೋಮದೇವ ತನ್ನ ನೀತಿಸೂತ್ರದಲ್ಲಿ ಬಹಳ ಹಿಂದೆಯೇ ಹೇಳಿದ್ದಾನೆ. ಸಕಾಲದಲ್ಲಿ

ಆರಂಭಿಸಿದ ಕೆಲಸಗಳು ಯಶಸ್ವಿಯಾಗುತ್ತವೆ. ಸಕಾಲದಲ್ಲಿ ಕೊಟ್ಟದ್ದು ಸ್ವಲ್ಪವಾದರೂ ಅದೇ ಮಹತ್ತ್ವದ್ದಾಗುತ್ತದೆ. ಸರಿಯಾದ ಕಾಲದಲ್ಲಿ ಎಲ್ಲವೂ ಸುಸೂತ್ರ ಕೂಡಿ ಬಂದು ಒಳ್ಳೆಯದೇ ಆಗುತ್ತದೆ. ಊಟಕ್ಕಿಲ್ಲದ ಉಪ್ಪಿನಕಾಯಿ ಏನು ಪ್ರಯೋಜನ?

ಮಹಾಭಾರತದಲ್ಲಿ ಕಾಲವನ್ನೇ ಪರಮೇಶ್ವರ (ಕಾಲೋ ಹಿ ಪರಮೇಶ್ವರಃ) ಎಂದು ಹೇಳಿದ ಮಾತು ಎಷ್ಟು ಸತ್ಯ! ನಮ್ಮ ಬದುಕಿನ ಕಾಲವನ್ನು ಪರಮೇಶ್ವರನು ಕೊಟ್ಟ ಭಾಗ್ಯ ಎಂದು ತಿಳಿಯಬೇಕು. ಅದರ ಮೌಲ್ಯ, ಸತ್ವ, ಆದರ್ಶ, ಗುರಿಗಳನ್ನು ಅರ್ಥಮಾಡಿಕೊಳ್ಳಬೇಕು. ಅದೇ ಜೀವನದ ಅನ್ವೇಷಣೆ. ಅಂಥವರು ಕಾಲದ ಇತಿಮಿತಿಗಳನ್ನೂ ಮೀರುತ್ತಾರೆ.

ನಮ್ಮನ್ನು ಪ್ರಬುದ್ಧರನ್ನಾಗಿ, ಪಕ್ವವಾಗಿ ಮಾಡುವುದೇ ಕಾಲ. ಅದು ಕಾಲಕ್ರಮೇಣ ಆಗುವ ಅನುಭವ. ಕಾಲವು ಎಲ್ಲವನ್ನೂ ಅವರವರ ಅನುಭವದಲ್ಲೇ ಹಣ್ಣು ಮಾಡುತ್ತದೆ. ಕಾಲಕ್ಕೆ-ಪರಿಸ್ಥಿತಿಗೆ ಸರಿಯಾಗಿ ಶತ್ರು, ಮಿತ್ರ ಎಲ್ಲರೂ ಇರುತ್ತಾರೆ. ಎಲ್ಲವೂ ಬರುತ್ತದೆ. ಕೂಡುತ್ತದೆ. ಹೋಗುತ್ತದೆ.

ಕಾಲಕಾಲಕ್ಕೆ ಮಳೆ ಬರಲಿ, ಬೆಳೆ ಆಗಲಿ, ಪ್ರಜೆಗಳಿಗೂ ಪ್ರಭುಗಳಿಗೂ ಒಳ್ಳೆಯ ಬುದ್ಧಿ ಕೊಡಲಿ ಎಂಬ ಹಿರಿಯರ ಒಂದು ಪ್ರಾರ್ಥನೆ ಎಲ್ಲ ಕಾಲಕ್ಕೂ ಅನ್ವಯಿಸುವಂಥ ವಿಶ್ವಪ್ರಾರ್ಥನೆ.

ನಾವೆಲ್ಲರೂ ಹುಟ್ಟಿನಿಂದ ಸಾವಿನವರೆಗೂ ಕಾಲದ ಅಧೀನವಿರುವವರು. ಅದಕ್ಕೆ ಆ ಕಾಲನಿಗೆ ನಮಸ್ಕಾರ (ಕಾಲಾಯ ತಸ್ಮೈ ನಮಃ) ಎಂಬ ಲೋಕೋಕ್ತಿ ಜನಜನಿತ.



# ಸುಖ ಜೀವನಕ್ಕೆ ಸರಳ ಸೂತ್ರಗಳು- 1

ಮನುಷ್ಯನ ಎಲ್ಲ ಪ್ರಯತ್ನಗಳಿರುವುದೂ ತನ್ನ ಸುಖಕ್ಕಾಗಿ. ತನ್ನ ಖುಷಿಗಾಗಿ, ತನ್ನ ಆನಂದಕ್ಕಾಗಿ.

ವಾಸ್ತವವೆಂದರೆ ಆ ಸುಖ, ಆ ಖುಷಿ, ಆ ಆನಂದ ಅವನೊಳಗೆಯೇ ಇದೆ. ಅದು ಹೊರಗಡೆ ಸಿಗುವ ವಸ್ತುವಲ್ಲ.

ತನ್ನೊಳಗಿರುವ ಈ ಆನಂದವನ್ನು ಅನುಭವಿಸಬೇಕಾದರೆ ಕೆಲವು ಸುಲಭ ಸೂತ್ರಗಳಿವೆ. ಅವುಗಳನ್ನು ನಮ್ಮ ಜೀವನದಲ್ಲಿ ಅಳವಡಿಸಿಕೊಂಡರೆ ಬದುಕು ಹೆಚ್ಚು ಸುಸೂತ್ರ, ಸುಖಕರ.

ಈ ಜೀವನ ನಿರಂತರವಾದ ಒಂದು ಪ್ರಯಾಣದ ಭಾಗ. ಇದು ಕೊನೆಯ ನಿಲ್ದಾಣವಲ್ಲ. ಈ ಸತ್ಯವನ್ನು ಎಷ್ಟು ಬೇಗ ತಿಳಿಯುತ್ತೇವೋ ಅಷ್ಟು ಉತ್ತಮ.

ಜೀವನದಲ್ಲಿ ಕಷ್ಟ-ಸುಖ, ಏರಿಳಿತಗಳು ಇದ್ದೇ ಇರುತ್ತವೆ. ಜೀವನದಲ್ಲಿ ಬೆಳಕಿನ ಕಡೆಗೆ ನೋಡೋಣ. ಜೀವನ ನಮಗೆ ಕೊಟ್ಟ ಭಾಗ್ಯದ ಅಂಶಗಳನ್ನು ಕಾಣೋಣ. ಜೀವನ ಕೊಡುತ್ತಿರುವ ಖುಷಿಯ ಕ್ಷಣಗಳನ್ನು ಸವಿಯೋಣ.

ಬದುಕು ನಮಗೆ ಬೇಕಾದಂತೆ ನಡೆಯುವುದಿಲ್ಲ. ಘಟನೆಗಳು ಸನ್ನಿವೇಶಗಳೆಲ್ಲದರಲ್ಲಿ ನಮಗೆ ನಿಯಂತ್ರಣವಿಲ್ಲ. ಜೀವನ ಬದಲಾಗುತ್ತ ಹೋಗುತ್ತದೆ. ಎಲ್ಲವನ್ನೂ ನಾವು ಬದಲಾಯಿಸಲಾರೆವು. ಇರುವಷ್ಟು ಹೊತ್ತಿನೊಳಗೆ ಜೀವನದಿಂದ ಕಲಿಯೋಣ. ಸಾಧ್ಯವಿದ್ದಷ್ಟನ್ನು, ಇತರರಿಗೆ ತೊಂದರೆಯಾಗದಂತೆ, ಕೊಡೋಣ, ಪಡೆಯೋಣ.

ಇನ್ನೊಬ್ಬರನ್ನು ಎಂದೂ ದ್ವೇಷಿಸುವುದು ಬೇಡ. ದ್ವೇಷ ನಮ್ಮನ್ನೇ ಸುಡುತ್ತದೆ. ಕ್ಷಮೆ ಮತ್ತು ಮರೆವು ಜೀವನದ ದೊಡ್ಡ ವರದಾನಗಳು. ದ್ವೇಷಿಸುವುದು ರಾಕ್ಷಸೀ ಗುಣ. ಕ್ಷಮಿಸುವುದು ದೈವಿಕ ಲಕ್ಷಣ.

ಇತರರಲ್ಲಿರುವ ಒಳ್ಳೆಯದನ್ನೇ ನೋಡೋಣ. ಅದನ್ನೇ ಮೆಚ್ಚಿಕೊಳ್ಳುವ. ಇನ್ನೊಬ್ಬರ ತಪ್ಪುಗಳನ್ನು ಹುಡುಕುವುದರಿಂದ ನಮ್ಮನ್ನು ನಾವೇ ಕ್ಷುದ್ರತನದಿಂದ ಕಂಡಂತೆ ಆಗುತ್ತದೆ. ತಪ್ಪು ಮಾಡದವರು ಯಾರಿದ್ದಾರೆ? ಪ್ರತಿಯೊಬ್ಬರಲ್ಲೂ ಕೆಲವು ಒಳ್ಳೆಯ ಗುಣಗಳಿವೆ. ಅವುಗಳ ಗುಣಗ್ರಹಣ ಮಾಡುವುದೇ ಸುಖಕರ.

ಈ ಪ್ರಪಂಚದಲ್ಲಿ ನಿಜವಾಗಿಯೂ ಯಾವುದೂ ನಮಗೆ ಸೇರಿದ್ದಲ್ಲ. ನಾವು ತಾತ್ಕಾಲಿಕವಾಗಿಯಷ್ಟೆ ಈ ಜಗತ್ತಿನಲ್ಲಿರುತ್ತೇವೆ. ಕೊಟ್ಟದ್ದು ತನಗೆ ಬಚ್ಚಿಟ್ಟದ್ದು ಪರರಿಗೆ. 'ನನ್ನದು, ನಮ್ಮದು' ಎಂಬ ಮಮಕಾರ ಕ್ಷಣಿಕವಾದುದು. ನಾವು ಇಲ್ಲಿರುವ ಎಲ್ಲವನ್ನೂ ಇಲ್ಲಿಯೇ ಬಿಟ್ಟು ಹೋಗಬೇಕು. ಅದರಲ್ಲಿ ನಮಗೆ ಯಾವ ಆಯ್ಕೆಯೂ ಸಾಧ್ಯವಿಲ್ಲ. ನಮ್ಮದು - ನನ್ನದು ಎಂಬುದೆಲ್ಲ ಕೇವಲ ಭ್ರಮೆ.

''ತಮಗಾಗಿ ಮಾತ್ರ ಬದುಕಿರುವವರು ಸತ್ತಂತೆಯೆ'' ಎಂದು ಸ್ವಾಮಿ ವಿವೇಕಾನಂದರು ಹೇಳಿದ ಮಾತು ನೂರಕ್ಕೆ ನೂರು ನಿಜ. 'ಇನ್ನೊಬ್ಬರಿಗಾಗಿ ಬದುಕುವುದೇ ನಿಜವಾದ ಬದುಕು.''

ಹಾಗೆ ಬದುಕಲಿಕ್ಕೆ ಎಷ್ಟು ಮಂದಿಗಳಿಗೆ ಧೈರ್ಯವಿದೆ?



# ಸುಖ ಜೀವನಕ್ಕೆ ಸರಳ ಸೂತ್ರಗಳು - 2

ವಿಚಾರ ವಿನಿಮಯ ಮಾಡುವಾಗ, ವ್ಯವಹಾರ ಮಾಡುವಾಗ ಇನ್ನೊಬ್ಬರ ಅಭಿಪ್ರಾಯಕ್ಕೆ ಗೌರವ ಕೊಡಬೇಕು. ಅವರ ಸ್ಥಾನದಲ್ಲಿದ್ದುಕೊಂಡು ಒಂದಿಷ್ಟು ಯೋಚಿಸಿ ನೋಡುವುದು ಒಳಿತು.

ವಿಷಯದ ಹಿಂದು - ಮುಂದುಗಳನ್ನು ಸರಿಯಾಗಿ ಅರಿಯದಿದ್ದರೆ ಪೂರ್ವಗ್ರಹ ಬೆಳೆಯುತ್ತದೆ. ಆಗ ನಮ್ಮ ಮನಸ್ಸಿನ ಕದಗಳನ್ನು ನಾವು ಮುಚ್ಚಿಕೊಂಡು ಬಿಡುತ್ತೇವೆ. ಅನೇಕ ಸಲ ನಾವು ಏನೆಂದು ತಿಳಿಯುತ್ತೇವೆಯೋ ವಸ್ತುಸ್ಥಿತಿ ಹಾಗಿರುವುದೇ ಇಲ್ಲ.

ಅನೇಕರು ಕುದುರೆ ಕನ್ನಡಕ ಕಟ್ಟಿಕೊಂಡವರಂತೆ ಮೂಗಿನ ನೇರಕ್ಕೆ ನೋಡುವವರು. ಯಾವಾಗಲೂ ವಿಷಯದ ಇನ್ನೊಂದು ಮಗ್ಗುಲನ್ನು ತಿಳಿಯುವ ಪ್ರಯತ್ನ ಮಾಡುವುದೊಳಿತು.

ಒಬ್ಬ ಮಿತ್ರ ಯಾವಾಗಲೂ ಹೇಳುತ್ತಿರುತ್ತಾನೆ - ''ಇನ್ನೊಬ್ಬರಿಗೆ ಉಪಕಾರ ಮಾಡದಿದ್ದರೆ ಬೇಡ, ಅಪಕಾರ ಮಾಡುವುದು ಬೇಡ. ತೊಂದರೆ ಕೊಡುವುದು ಬೇಡ.''

ಇತರರಿಗೆ ಒಳ್ಳೆಯದು ಮಾಡಿದಾಗ ಅವರಿಗೆ ಮತ್ತು ನಮಗೆ ಸಿಗುವ ಆನಂದ ಅಪೂರ್ವವಾದುದು. ಅದರಲ್ಲಿ ದೈವಿಕ ಶಕ್ತಿಯಿದೆ.

ಬದುಕು ಎಷ್ಟು ಸುಂದರ ! ಈ ಸೃಷ್ಟಿ ಎಷ್ಟು ವೈವಿಧ್ಯಪೂರ್ಣ ! ನಮ್ಮ ಸುತ್ತಲಿರುವ ಮರ, ಗಿಡ, ಹೂ, ಹಣ್ಣು, ಪಶು, ಪಕ್ಷಿ, ಕೀಟಗಳು, ಸೂರ್ಯ-ಚಂದ್ರ, ನಕ್ಷತ್ರ, ಮೋಡ .... ಹೀಗೆ ಒಂಟಿಯಾಗಿ ಕೂತು

ಇವುಗಳ ವೀಕ್ಷಣೆ, ನಿರೀಕ್ಷಣೆ ಮಾಡುವ ಆನಂದವನ್ನು ನೀವು ಎಂದಾದರೂ ಅನುಭವಿಸಿದ್ದೀರಾ?

ಪ್ರತಿದಿನ ಸೂರ್ಯೋದಯ ಸೂರ್ಯಾಸ್ತಗಳಾಗುತ್ತವೆ. ಅವುಗಳ ವೈವಿಧ್ಯ, ಸೃಷ್ಟಿಯ ಆಟ ಬಲು ಮೋಜಿನದು. ಅದರ ಸಂತಸದ ಕ್ಷಣಗಳನ್ನು ಸವಿಯುವ ಸಹೃದಯವನ್ನು ನಾವು ಬೆಳೆಸಿಕೊಳ್ಳೋಣ.

ಮನಸ್ಸಿನ ಕ್ಷಿತಿಜವನ್ನು ವಿಸ್ತರಿಸಿಕೊಂಡಷ್ಟು, ಮುಕ್ತ ಮನಸ್ಸು ಬೆಳೆಸಿಕೊಂಡಷ್ಟು ಬೇಗ ಬದುಕು ಹೆಚ್ಚು ನಿರಾಳವಾಗುತ್ತದೆ. ನಮ್ಮೊಳಗೇ ಸುಖಾನುಭವ ಉಂಟಾಗುತ್ತದೆ.

ಸುಖ ಎಂಬುದು ಮನಸ್ಸಿನ ಒಂದು ಸ್ಥಿತಿ. ಮನಸ್ಸಿನ ಸಮತೋಲ. ಲೌಕಿಕ ಪ್ರಪಂಚದ ವಸ್ತು ವಿಷಯ, ಆಸ್ತಿಪಾಸ್ತಿ ಸಂಗ್ರಹ ನಿಜವಾಗಿಯೂ ದುಃಖದ ಬೀಜಗಳು.

ವರ್ತಮಾನವೇ ನಮಗೆ ಮುಖ್ಯ. ಇಂದು, ಈಗ ಅತಿಮುಖ್ಯ. ಆಗಿ ಹೋದುದಕ್ಕಾಗಿ ಮತ್ತು ಬರಲಿರುವ ಸಂಗತಿಗಳಿಗಾಗಿಯೇ ಅನೇಕರು ತಲೆ ಕೆರೆದುಕೊಳ್ಳುತ್ತಾರೆ. ವಿಚಾರಪರರಾಗುತ್ತಾರೆ. ಚಿಂತಿತರಾಗುತ್ತಾರೆ. ಇಂದಿನ ದಿನವೇ ಸುದಿನ. ಈಗಿನ ಕ್ಷಣವೇ ಸುಮುಹೂರ್ತ. ಭೂತ ಭವಿಷ್ಯಗಳ ನಡುವೆ ನಾವು ಸ್ಯಾಂಡ್‌ವಿಚ್ ಆಗಿ ಅನವಶ್ಯಕ ದುಃಖವನ್ನು ಆಯ್ದುಕೊಳ್ಳುತ್ತೇವೆ. ಈ ದುಃಖದ ಆಯ್ಕೆ, ಅದಕ್ಕೆ ಸ್ವಾಗತ ಮಾಡುವ ಕ್ರಮ ವಿಚಿತ್ರವಲ್ಲವೆ?

ಧಾರ್ಮಿಕ ಪ್ರಜ್ಞೆ, ಸಂಗೀತ, ಸಾಹಿತ್ಯ, ಕಲೆ, ಶಿಲ್ಪ, ಶಿಕ್ಷಣ, ಇವೆಲ್ಲ ನಮ್ಮನ್ನು ಇನ್ನೂ ಉತ್ತಮ ಮಾನವರನ್ನಾಗಿ ಮಾಡಬೇಕು.

ಸದ್ಗುಣ, ಸಹೃದಯ, ಸಹನೆಗಳೇ ಉತ್ತಮ ಧರ್ಮದ ಗುಣಗಳು.

ಪ್ರಯತ್ನಪೂರ್ವಕ ಈ ಗುಣಗಳನ್ನು ಬೆಳೆಸಿಕೊಳ್ಳುವುದೇ ಜೀವನದ ಮಹತ್ಸಾಧನೆ.





# ಧರ್ಮಸ್ಥ

ಜೀವನ ಒಂದು ವ್ಯವಸ್ಥೆಯ ವ್ಯಷ್ಟಿ-ಸಮಷ್ಟಿರೂಪ. ಅದು ವ್ಯಕ್ತಿಯಿಂದ ಆರಂಭಗೊಂಡು, ಸಮಾಜದ ವೃತ್ತದಲ್ಲಿ ವಿಹರಿಸಿ, ಅದೇ ವೃತ್ತದಲ್ಲಿ ಪೂರ್ಣಗೊಳ್ಳುತ್ತದೆ.

ಆ ವ್ಯವಸ್ಥೆ ಸರಿಯಾಗಿಲ್ಲದಿದ್ದರೆ ಅದು ವಿಷವೃತ್ತವಾಗುತ್ತದೆ. ಸಾಮಾಜಿಕ ವ್ಯವಸ್ಥೆಯಲ್ಲಿ ಶಿಸ್ತು, ವ್ಯವಸ್ಥೆ, ನಿಷ್ಠೆ ಇವುಗಳು ಅತ್ಯಂತ ಅವಶ್ಯ.

ಕೌಟಿಲ್ಯನ ಕಾಲದಲ್ಲಿ ಈ ವ್ಯವಸ್ಥೆಯನ್ನು ಸರಿಯಾಗಿ ನೋಡಿಕೊಳ್ಳಲು ನ್ಯಾಯಾಧೀಶರಿದ್ದರು. ಅವರನ್ನು 'ಧರ್ಮಸ್ಥ' ಅನ್ನುತ್ತಿದ್ದರು. ಸಮಾಜದಲ್ಲಿ ವ್ಯವಸ್ಥೆ, ಶಿಸ್ತುಗಳನ್ನು ಸರಿಯಾಗಿ ನೋಡಿಕೊಳ್ಳುವುದೇ ಇವರ ಮುಖ್ಯ ಕರ್ತವ್ಯ.

ವ್ಯವಸ್ಥೆ ಸರಿಯಾಗಿ ಆಗಬೇಕಾದರೆ ತಪ್ಪಿತಸ್ಥರನ್ನು ಶಿಕ್ಷಿಸಲೇಬೇಕು. ಯಾವುದೂ ಏಕಪಕ್ಷೀಯವಾಗಿ ನಡೆಯಕೂಡದು. ಅರಸನ ಮಗನೇ ಆಗಲಿ, ಅವನು ತಪ್ಪು ಮಾಡಿದರೆ ಅವನಿಗೆ ಶಿಕ್ಷೆ ಆಗಬೇಕು. ಅದುವೇ ಇಡೀ ವ್ಯವಸ್ಥೆಯ ಮೊದಲ ಹೆಜ್ಜೆ.

ಎಲ್ಲರೂ ಸಮಾನರು, ಕೆಲವರು ಹೆಚ್ಚು ಸಮಾನರು ಎಂಬ ಇವತ್ತಿನ ಸ್ವತಂತ್ರ ಭಾರತದ ಕತೆಗೂ ಕೌಟಿಲ್ಯನ ಭಾರತಕ್ಕೂ ಅಜಗಜಾಂತರ.

ಅರಸನೇ ತನ್ನ ಕರ್ತವ್ಯವನ್ನು ಸರಿಯಾಗಿ ಮಾಡದೆ, ಹೊಣೆಗಾರಿಕೆಯಿಂದ ತಪ್ಪಿಸಿಕೊಂಡರೆ ನರಕಕ್ಕೆ ಹೋಗುತ್ತಾನೆ ಎಂಬ ಮಾತಿನಲ್ಲಿ ಅರಸನಿಗೂ ಜನರಿಗೂ ನಂಬಿಕೆಯಿತ್ತು.

ಧಾರ್ಮಿಕ ನಡವಳಿಕೆಯೆಂದರೆ ಇನ್ನೊಬ್ಬರಿಗೆ ತೊಂದರೆಯಾಗದಂತೆ ನಡೆದುಕೊಳ್ಳುವುದು. ಶಿಷ್ಟ ರಕ್ಷಣೆ ಮತ್ತು ದುಷ್ಟರ ಸಂಹಾರ ರಾಜ್ಯಾಡಳಿತದ ಪ್ರಥಮ ಕರ್ತವ್ಯವಾಗಿತ್ತು.

ಚೀನದಲ್ಲಿ ಒಂದು ಗಾದೆ ಮಾತಿದೆ. ''ಅತ್ಯಂತ ಖುಷಿಯಾದಾಗ ಯಾರಿಗೂ ವಚನ ಕೊಡಬೇಡ. ಪ್ರತಿಜ್ಞೆ ಮಾಡಬೇಡ. ತುಂಬ ಕೋಪಗೊಂಡಾಗ ಯಾರಿಗೂ ಪತ್ರ ಬರೆಯಬೇಡ'' ಎಂಬ ಈ ಮಾತಿನಲ್ಲಿ ಎಷ್ಟು ಅನುಭವ ತುಂಬಿದೆ!

ಕೋಪ ಮತ್ತು ಖುಷಿ ತೂಗುವ ಲೋಲಾಕಿನ ಎರಡು ಧ್ರುವಗಳಿದ್ದಂತೆ. ಂಥ ಸಂದರ್ಭದಲ್ಲಿ ಸಮತೋಲ ತಪ್ಪಿಹೋಗುವ ಅವಕಾಶಗಳೇ ಜಾಸ್ತಿ. ಆಗ ಾವ ನಿರ್ಧಾರಗಳನ್ನೂ ತೆಗೆದುಕೊಳ್ಳಬಾರದು ಎಂಬುದೇ ಈ ವಿವೇಕದ ಮಾತಿನ ರ್ಥ. ಆಗ ಧಾರ್ಮಿಕ ದೃಷ್ಟಿಗೆ ಪೊರೆ ಬಂದಿರುತ್ತದೆ.

ಶಾಲೆಯಲ್ಲಿ ಶಿಕ್ಷಕನ ನಡತೆ, ಮನೆಯಲ್ಲಿ ಹಿರಿಯರ ನಡೆ-ನುಡಿ, ದೇಶದ ಯಕರ ಜೀವನ ರೀತಿ ಇವು ಧಾರ್ಮಿಕ ಬುದ್ಧಿಯಿಂದ ಆಚರಣೆಗೊಂಡರೆ ಆ ಶದ ಮೌಲ್ಯಗಳು ವರ್ಧಿಸುತ್ತವೆ.

ಇಲ್ಲಿ ಧಾರ್ಮಿಕ ಬುದ್ಧಿ ಎಂದರೆ ದೇವರು, ಪೂಜಾ ಪದ್ಧತಿ ಇತ್ಯಾದಿ ಕಲ್ಪನೆ, ಧಿ ನಿಯಮಗಳಲ್ಲ. ಒಟ್ಟು ಬದುಕಿನ ರೀತಿಯೇ ಧಾರ್ಮಿಕ ನಡವಳಿಕೆ. ನಡೆ, ನುಡಿ, ದ್ಧ ಮನಸ್ಸು, ಔದಾರ್ಯ, ಪರೋಪಕಾರಗಳೇ ಧಾರ್ಮಿಕ ಬದುಕಿನ ರೀತಿಗಳು.

ಬದುಕಿನಲ್ಲಿ ಶ್ರೇಷ್ಠತ್ವ (ಎಕ್ಸಲೆನ್ಸ್) ಸಾಧಿಸಬೇಕೆನ್ನುವವರು ತಿಯೊಂದನ್ನೂ ಸೂಕ್ಷ್ಮವಾಗಿ, ಕೂಲಂಕಷವಾಗಿ ಪರಿಶೀಲಿಸಿ ಅದನ್ನು ಳವಡಿಸಿಕೊಳ್ಳುತ್ತಾರೆ. ಇನ್ನೊಬ್ಬರ ನಂಬಿಕೆಯನ್ನು ಗೌರವಿಸುವುದೂ ಧರ್ಮವೇ. ನಂಬಿಕೆ ಮಾತ್ರ ಸರಿ ಎಂಬುದು ಅವೈಜ್ಞಾನಿಕ ಹಾಗೂ ಪೂರ್ವಗ್ರಹ ಪೀಡಿತ. ು ದುರಾಗ್ರಹ. ದುಷ್ಟತನ. ಕ್ರೌರ್ಯ.

ಒಳ್ಳೆಯ ಬಗೆಯ ಗುಣಗಳನ್ನು ಪ್ರಜೆಗಳು ರಕ್ತಗತ ಮಾಡಿಕೊಳ್ಳಬೇಕಾದರೆ ನಕ್ಕೆ ಕಾನೂನು ಮಾತ್ರ ಒಂದು ಆಯುಧವಲ್ಲ. ಈ ಕಾನೂನನ್ನು ಎಲ್ಲರೂ ರವಿಸಬೇಕು. ಮುಖ್ಯವಾಗಿ ನಾಯಕರು ತಾವೂ ಅವನ್ನು ತಮ್ಮ ನಡೆ-ನುಡಿಯಲ್ಲಿ ೀರಿಸಿಕೊಡಬೇಕು.

ಧರ್ಮದಂತೆ ನಡೆಯುವವರು ಎಚ್ಚರಿಕೆಯಿಂದ ಪೂರ್ವಾಪರಗಳನ್ನು ಶೀಲಿಸಿ ನಿರ್ಧಾರ ತೆಗೆದುಕೊಳ್ಳುತ್ತಾರೆ. ಹಿಂದೆ ಮುಂದೆ ನೋಡದೆ ಡುಕುವುದು ಹಲವು ಕಷ್ಟ ಪರಂಪರೆ, ಸಮಸ್ಯೆಗಳಿಗೆ ಕಾರಣವಾಗುತ್ತದೆ.

ದೇಶದ ನಾಯಕರು ಧರ್ಮಕ್ಕೆ ವಿರುದ್ಧವಾಗಿ ನಿರ್ಧಾರಗಳನ್ನು ದುಕೊಂಡಾಗ ಇಡೀ ರಾಷ್ಟ್ರದ ಸಮಸ್ಯೆಗಳು ಹೆಚ್ಚಾಗುತ್ತವೆ. ಧಾರ್ಮಿಕ ಪ್ರಜ್ಞೆ ುವವರು ದೂರದರ್ಶಿತ್ವವನ್ನು ಗಮನದಲ್ಲಿಟ್ಟುಕೊಂಡು ಯಾವುದೇ ನಿರ್ಧಾರಕ್ಕೆ ುತ್ತಾರೆ. ಅಲ್ಲಿ ಸ್ವಾರ್ಥದ ಲವಲೇಶವೂ ಇರುವುದಿಲ್ಲ. ಲೋಕಕಲ್ಯಾಣವೇ ್ರಿಯ ಧರ್ಮದೃಷ್ಟಿ.



# ಶೀಲ

ಆಗ ಅಸುರರಾಜ ಪ್ರಹ್ಲಾದ ರಾಜನಾಗಿ ಆಳುತ್ತಿದ್ದ. ಪ್ರಜೆಗಳೆಲ್ಲ ನೆಮ್ಮದಿಯಾಗಿದ್ದರು. ಸಂತೃಪ್ತಿ, ಸುಖದಿಂದಿದ್ದರು.

ಭೂಲೋಕದಲ್ಲಿ ಇಷ್ಟೆಲ್ಲ ನೆಮ್ಮದಿ ನೆಲಸಲು ಕಾರಣವೇನು ಎಂದು ದೇವಲೋಕದಲ್ಲಿ ಚರ್ಚೆಯಾಯಿತು. ಅದಕ್ಕೆ ಪ್ರಹ್ಲಾದ ರಾಜನ ಶೀಲವೇ ಮೂಲಕಾರಣವೆಂದು ದೇವರ್ಷಿ ನಾರದರು ಹೇಳಿದರು.

ದೇವಲೋಕಕ್ಕಿಂತ ಭೂಲೋಕ ಮುಂದಿದ್ದರೆ ಸರಿಯೆ? ದೇವೇಂದ್ರನಿಗೆ ಅದೇ ಚಿಂತೆಯಾಯಿತು. ಉಪಾಯದಿಂದ ಪ್ರಹ್ಲಾದನ ಶೀಲಹರಣ ಮಾಡಬೇಕು ಎಂದು ಭೂಲೋಕಕ್ಕೆ ಬಂದ. ಬ್ರಾಹ್ಮಣನಾಗಿ ವೇಷ ಪಲ್ಲಟಿಸಿ ಪ್ರಹ್ಲಾದನ ಮುಂದೆ ನಿಂತ.

ಪ್ರಹ್ಲಾದ ಈ ಬ್ರಾಹ್ಮಣನಿಗೆ ಆತಿಥ್ಯ ನೀಡಿದ. ಗೌರವ ಆಸನದಲ್ಲಿ ಕುಳ್ಳಿರಿಸಿ ಪೂಜೆ ಮಾಡಿದ. ಇಂದ್ರ ಒಳಗೊಳಗೇ ನಗುತ್ತಿದ್ದ.

ಪ್ರಹ್ಲಾದ ಕೇಳಿದ ''ನಿಮಗೇನು ಬೇಕು? ಕೇಳಿ ಕೊಡುತ್ತೇನೆ.''

ಬ್ರಾಹ್ಮಣವೇಷಧಾರಿ ಇಂದ್ರ ಹೇಳಿದ ''ನಿಮ್ಮ ಶೀಲ ಬೇಕು''

''ಸರಿ, ಆಗಲಿ'' ಎಂದ ದಾನಶೂರ ಪ್ರಹ್ಲಾದ.

ಇಂದ್ರನ ಆನಂದಕ್ಕೆ ಪಾರವೇ ಇಲ್ಲ. ವಿಜಯೋತ್ಸಾಹದಿಂದ ದೇವಲೋಕಕ್ಕೆ ಮರಳಿದ.

ಪ್ರಹ್ಲಾದನ ದೇಹದಿಂದ ದೇದೀಪ್ಯಮಾನವಾದ ಆಕೃತಿಯೊಂದು ಹೊರಬಂದು ''ನಾನು ಶೀಲ, ನೀನು ನನ್ನನ್ನು ದಾನವಾಗಿತ್ತೆ. ನಾನು ಹೊರಟೆ'' ಎಂದು ಹೋಗಿಯೇ ಬಿಟ್ಟಿತು.

ಅದರ ಹಿಂದೆಯೇ ಧರ್ಮ ಎದ್ದು ನಿಂತು ''ಎಲ್ಲಿ ಶೀಲ ಇರುವುದೋ ಅಲ್ಲಿ ನಾನಿರಬೇಕು. ನಾನು ಶೀಲದೊಂದಿಗೇ ಹೊರಟೆ '' ಎಂದು ಹೋಗಿಯೇ ಬಿಟ್ಟಿತು.

ಅನಂತರ ಸತ್ಯ ಎದ್ದು ಬಂತು. ''ಶೀಲ ಮತ್ತು ಧರ್ಮ ಇರುವಲ್ಲೇ ನು ಇರುವುದು. ನಾನು ಇಲ್ಲಿರಲಾರೆ'' ಎಂದು ಹೋಗಿಯೇ ಬಿಟ್ಟಿತು.

ಅದರ ಬಳಿಕ ಸತ್ಯದ ಅನುಯಾಯಿಗಳಾದ ಶಕ್ತಿ ಮತ್ತು ಸುರುಚಿ ಡ ಹೊರಟೇ ಬಿಟ್ಟರು. ಶ್ರದ್ಧೆ, ನಿಷ್ಠೆಯರೂ ಹೊರಟರು.

ಅನಂತರ ಪ್ರಹ್ಲಾದನ ದೇಹದಿಂದ ದಿವ್ಯಪ್ರಭೆಯೊಂದು ರಹೊಮ್ಮಿತು. ಶೀಲ, ಧರ್ಮ, ಸತ್ಯ, ಶಕ್ತಿ, ಸುರುಚಿ, ಶ್ರದ್ಧೆ, ನಿಷ್ಠೆಗಳೂ ರಟುಹೋದ ಬಳಿಕ ವಿವೇಕ ಜ್ಞಾನಗಳೂ ಹೊರಟುಹೋದವು.

ಅಸುರರಾಜನಾದ ಪ್ರಹ್ಲಾದನಿಗೆ ಈಗ ಒಮ್ಮೆಲೇ ಎಚ್ಚರವಾಗಿ ಯವಾಯಿತು. ಅವನು ಬೆವತು ಬಿಟ್ಟ.

''ಯಾರು ಆ ಬ್ರಾಹ್ಮಣ? ಅವನೆಲ್ಲಿ ಹೋದ?'' ಎಂದು ಚಾರಿಸಿದ.

ಅವನು ವೇಷ ಪಲ್ಲಟಿಸಿದ ದೇವೇಂದ್ರ ಎಂದು ತಿಳಿದು ರ್ವಿಣ್ಣನಾದ.

ಅವನೊಳಗಿನ ಅಂತರಾತ್ಮ ಘೋಷಿಸಿತು. ನಿನ್ನ ಶೀಲದ ಲದಿಂದಲೇ ಇಷ್ಟೆಲ್ಲ ಯಶಸ್ಸು, ಸಂಪತ್ತು, ಕೀರ್ತಿಯನ್ನು ಸಂಪಾದಿಸಿದೆ. ನ್ನ ದುರ್ಬಲ ಗಳಿಗೆಯಲ್ಲಿ ಅವನ್ನೆಲ್ಲ ಕಳೆದುಕೊಂಡೆ. ನೀನು ದುಡುಕಿದೆ.

ಈ ಕತೆಯನ್ನು ಶರಶಯ್ಯೆಯಲ್ಲಿ ಮಲಗಿದ ಭೀಷ್ಮಾಚಾರ್ಯರು ರ್ಮರಾಜನಿಗೆ ಹೇಳಿ ''ಅರಸನಿಗೆ ಅವಶ್ಯವಾಗಿ ಬೇಕಾದುದು ಶೀಲ. ಎಲ್ಲಿ ಲವಿರುವುದೋ ಅಲ್ಲಿ ಧರ್ಮ, ಸತ್ಯ, ಶಕ್ತಿ, ಸುರುಚಿ, ನಿಷ್ಠೆ, ಶ್ರದ್ಧೆ, ವೇಕ, ಜ್ಞಾನಗಳಿರುತ್ತವೆ. ಅವನ್ನು ಕಾಪಾಡುವುದೇ ಆಡಳಿತದ ಮುಖ್ಯ ಹಸ್ಯ'' ಎಂದ.





# ದೈವಾಧೀನ

**ಸಾ**ಮಾನ್ಯ ಬಳಕೆಯ ಭಾಷೆಯಲ್ಲಿ ದೈವಾಧೀನರಾದರು ಎಂದರೆ ನಿಧನರಾದರು, ಮರಣಪಟ್ಟರು ಎಂದು ಅರ್ಥ. ಆದರೆ ನಾವೆಲ್ಲ ಮರಣಪಟ್ಟ ಮೇಲೆಯೇ ದೈವಾಧೀನರಾಗಬೇಕೆ?

ಜೀವಂತವಾಗಿರುವಾಗ, ಬದುಕಿದ್ದಾಗ ದೈವಾಧೀನರಾಗಿರುವುದಿಲ್ಲವೆ?

'ದೈವಾಧೀನಂ ಜಗತ್ಸರ್ವಂ' (ಜಗತ್ತೆಲ್ಲವೂ ದೈವದ ಅಧೀನ), 'ದೈವಾಧೀನಂ ತ್ಯಜೇದ್ಭಾವಿ' (ಭವಿಷ್ಯವೆಲ್ಲ ಭಗವಂತನ ಅಧೀನ) ಆದುದರಿಂದ ಭವಿಷ್ಯದ ಚಿಂತೆಯನ್ನು ಬಿಟ್ಟು ಬಿಡು. ಈ ಮಾತುಗಳ ಅರ್ಥವೇನು?

ರಾಮಾಯಣದಲ್ಲಿ ಅನೇಕ ಕಡೆ ಈ ಮಾತು ಬರುತ್ತದೆ. 'ದೈವಂ ಹಿ ದುರತಿಕ್ರಮಂ' - ದೈವವನ್ನು ಮೀರಲು ಯಾರಿಗೂ ಸಾಧ್ಯವಿಲ್ಲ. ರಾಮನೆ ಭರತನಿಗೆ ಹೇಳುತ್ತಾನೆ - ''ಇದೆಲ್ಲ ದೈವನಿಯಮ. ಇದನ್ನು ಮೀರುವುದು ಯಾರಿಗೂ ಸಾಧ್ಯವಿಲ್ಲ.''

ಎಲ್ಲದಕ್ಕೂ ದೈವಕೃಪೆ ಬೇಕು. ಮನುಷ್ಯನಿಗೆ ಮೀರಿದ ಈ ಶಕ್ತಿ ಇದ್ದರೆ ಬೆಟ್ಟದಂತೆ ಬಂದದ್ದು ಬೆಣ್ಣೆಯಂತೆ ಕರಗಿ ಹೋಗುತ್ತದೆ. ಇಲ್ಲವಾದರೆ ಬೋಳು ಮೈದಾನಿನಲ್ಲಿ ಬೆಟ್ಟ, ಕಂದಕ, ಗುಹೆ, ಕಾಡುಗಳೇ ಎದುರಾಗುತ್ತವೆ.

ದೈವ ಮುನಿದರೆ, ಅಥವಾ ದೈವಕೃಪೆ ಇಲ್ಲವಾದರೆ ಹೆತ್ತವರು, ಬಂಧು, ಬಳಗ, ಸ್ನೇಹಿತರು ಯಾರೂ ಸಹಾಯಕ್ಕೆ ಬರಲಾರರು. ಸಹಾಯ ಮಾಡಬೇಕು ಎಂಬ ಪ್ರಚೋದನೆಯಾಗಲಿ, ಸ್ವಯಂ ಪ್ರೇರಣೆಯಾಗಲಿ ಅವರಿಗೆ ಬರಲಾರದು. ದೈವನಿಯಮವನ್ನು ಮೀರುವುದು ಮನುಷ್ಯ ಶಕ್ತಿಗೆ ಸಾಧ್ಯವಿಲ್ಲ.

ಜೀವನದಲ್ಲಿ ಪ್ರತಿನಿತ್ಯ ದೈವಾಧೀನರಾಗಿದ್ದವರಿಗೆ ದೈವಸಹಾಯ

ತನ್ನಷ್ಟಕ್ಕೆ ಸಿಗುತ್ತದೆ. ದೈವಕೃಪೆಯಿಂದ ಏನೇನು ಲಭಿಸಬೇಕೆಂದು ಇದೆಯೋ ಅದು ತಾನಾಗಿಯೇ ಅನಾಯಾಸವಾಗಿ ದೊರೆಯುತ್ತದೆ.

ದೈವ ಬಲವಿಲ್ಲದಿದ್ದರೆ ಒಂದು ಹುಲ್ಲು ಕಡ್ಡಿಯೂ ವಿರೋಧ ಮಾಡುತ್ತದೆ. ಆ ಯಃ ಕಶ್ಚಿತ್ ಹುಲ್ಲುಕಡ್ಡಿಯೇ ವಜ್ರದಷ್ಟು ಕಠಿಣವಾಗುತ್ತದೆ. ದೈವಕೃಪೆ ಇದ್ದರೆ ಮಾನವನು ಸಾಮರ್ಥ್ಯ ಪಡೆಯುತ್ತಾನೆ. ಇಲ್ಲವಾದರೆ ದುರ್ಬಲನಾಗುತ್ತಾನೆ.

ಮಲಯಾಳಂ ಭಾಷೆಯಲ್ಲಿ ಒಂದು ಮನೆ ಮಾತಿದೆ. ದೈವಾನುಗ್ರಹವಿಲ್ಲದಿದ್ದರೆ ಉಟ್ಟ ಬಟ್ಟೆಯೇ ಹಾವಾಗಿ ಕಚ್ಚುತ್ತದೆಯಂತೆ.

ಜೀವನದಲ್ಲಿ ಪರಮಾತ್ಮನ ಕೃಪೆ ನಿರಂತರ ಬೇಕೆಂದು ಪ್ರಾರ್ಥಿಸುವುದು. ದೈವಕ್ಕೆ ಶರಣಾಗುವುದು, ಅಂದರೆ ದೈವಿಕ ಶಕ್ತಿಯೊಂದಿಗೆ ಒಂದಾಗುವುದು. ಇದು ಅದ್ಭುತ ಸಾಮರ್ಥ್ಯವನ್ನು ಕೊಡುತ್ತದೆ.

ದೈವಾಧೀನರಾಗುವುದು ಜೀವನದ ಅಂತಿಮವಾದ ಒಂದು ಕ್ರಿಯೆಯಲ್ಲ. ಹಾಗೆ ಆಗಬಾರದು. ಬದುಕಿನುದ್ದಕ್ಕೂ ದೈವಾಧೀನರಾಗಿರುವವರಿಗೆ ಮಾನಸಿಕ ನೆಮ್ಮದಿ, ಯಶಸ್ಸು, ಸುಸೂತ್ರ ಬದುಕು ಲಭಿಸುತ್ತದೆ. ಆತ್ಮವಿಶ್ವಾಸ ಮೂಡುತ್ತದೆ.

ದೈವಾನುಗ್ರಹದಿಂದಲೇ ಈ ಜೀವನದ ಸಮಸ್ತ ಸಂಗತಿಗಳೂ ನಡೆಯುತ್ತವೆ. ನಾವು ನಿಮಿತ್ತ ಮಾತ್ರ ಎಂಬ ಅರಿವು ಬೇಕು. ಹಾಗಾದರೆ ಎಲ್ಲವೂ ಪೂರ್ವನಿಯೋಜಿತವೆ? ನಾವು ಸಾಧಿಸುವಂಥದ್ದು ಏನೂ ಇಲ್ಲವೆ?

ಸಾಧನೆ, ಕಾಯಕ, ಶ್ರದ್ಧೆ, ನಿಷ್ಠೆ, ಛಲ, ಪುರುಷ ಪ್ರಯತ್ನಗಳಿಗೆ ಏನು ಬೆಲೆ?

ದೈವಾಧೀನರಾಗುವುದಕ್ಕೂ ಪುರುಷ ಪ್ರಯತ್ನ ಬೇಡವೆ?





# ಪುರುಷ ಪ್ರಯತ್ನ

ಎಲ್ಲವೂ ದೈವ ನಿರ್ಣಯವೇ ಆದರೆ ಮನುಷ್ಯ ಪ್ರಯತ್ನಕ್ಕೆ ಏನು ಅರ್ಥ? ಏನು ಬೆಲೆ? ಮಾನವನ ಶಿಸ್ತು, ವಿಚಾರ, ಶ್ರದ್ಧೆ, ನಿಷ್ಠೆ, ಸಂಕಲ್ಪ, ಕಠಿಣ ಪರಿಶ್ರಮ, ಸಾಧನೆ, ತಪಸ್ಸು ಇವುಗಳಿಗೆ ಏನೂ ಅರ್ಥವಿಲ್ಲವೇ?

ಸೋಮದೇವನೆಂಬ ಕವಿ ತನ್ನ 'ಯಶಸ್ತಿಲಕಚಂಪೂ' ಗ್ರಂಥದಲ್ಲಿ ಬರೆದ ಮಾತು ಈ ಜಿಜ್ಞಾಸೆಗೆ ಉತ್ತರ ಕೊಡಲು ಪ್ರಯತ್ನಿಸಿದೆ.

ವಿಹಾಯ ಪೌರುಷಂ ಯೋ ಹಿ ದೈವಮೇವಾವಲಂಬತೇ ।
ಪ್ರಾಸಾದಸಿಂಹವತ್ತಸ್ಯ ಮೂರ್ಧ್ನಿ ತಿಷ್ಠಂತಿ ವಾಯಸಾಃ ॥

(ಯಾವನು ಪುರುಷ ಪ್ರಯತ್ನವನ್ನು ಬಿಟ್ಟು ದೈವವನ್ನೇ ನಂಬಿಕೊಂಡಿರುತ್ತಾನೋ ಅವನ ತಲೆಯ ಮೇಲೆ ಪ್ರಾಸಾದದ ವೃತ್ತದಲ್ಲಿರುವ ಸಿಂಹ ಪ್ರತಿಮೆಯ ಮೇಲೆ ಹೇಗೋ ಹಾಗೆ ಕಾಗೆಗಳು ಕುಳಿತುಕೊಳ್ಳುತ್ತವೆ)

ಸಿಂಹದಂತೆ ಆಗಬೇಕೋ ಕಾಗೆಯಂತೆ ಆಗಬೇಕೋ ಎಂಬ ಆಯ್ಕೆಯನ್ನು ನಮಗೇ ಬಿಟ್ಟಿರುತ್ತದೆ. ಅಷ್ಟು ಸ್ವಾತಂತ್ರ್ಯದ ಅವಕಾಶವನ್ನು ಪ್ರತಿಯೊಬ್ಬರಿಗೂ ದೈವ ಕೊಡುತ್ತದೆ. ಅದನ್ನು ಯಾವ ರೀತಿ ಉಪಯೋಗಿಸಿಕೊಳ್ಳುವುದು ಎಂಬುದು ಅವರವರ ಮೇಲೆಯೇ ಅವಲಂಬಿಸಿದೆ. ಎಷ್ಟೋ ಒಳ್ಳೆಯ ಅವಕಾಶಗಳನ್ನು ಹಾಳು ಮಾಡುವವರಿಲ್ಲವೆ?

ಹಿಂದೆ ಸ್ಮೃತಿಗಳನ್ನು ಬರೆದವರು ಆಗಿನ ಕಾಲದ ಮನೋಭಾವವನ್ನೇ ಗುರುತಿಸಿ, ದಾಖಲಿಸಿದರು. ಅವರ ಅಭಿಪ್ರಾಯದಂತೆಯೂ ಪುರುಷ ಪ್ರಯತ್ನ ಅತ್ಯಂತ ಅಗತ್ಯ. ಅದೇ ಶ್ರೇಷ್ಠ ಲಕ್ಷಣ.

ಚಾಣಕ್ಯನಂತೂ 'ಪುರುಷಕಾರಮನುವರ್ತತೇ ದೈವಂ' - ದೈವವು ಪುರುಷಪ್ರಯತ್ನವನ್ನು ಅನುಸರಿಸುತ್ತದೆ - ಎಂದೇ ಖಚಿತವಾಗಿ

ಹೇಳಿದ್ದಾನೆ. ದೈವದ ಆಟ ಒಂದೆಡೆ ಇದ್ದರೆ ಮನುಷ್ಯ ಪ್ರಯತ್ನವೂ ಇರಬೇಕು. ಒಂದು ದೃಷ್ಟಿಯಲ್ಲಿ ಇಡೀ ಜೀವನದ ಆಟದಲ್ಲಿ ಮನುಷ್ಯನು ಸಾಧನೆ, ಶ್ರದ್ಧೆಗಳಿಂದ ತನ್ನ ಕರ್ತವ್ಯವನ್ನು ಚೆನ್ನಾಗಿ ಮಾಡುತ್ತಾ ಹೋದರೆ ದೈವವೂ ಒಲಿಯುತ್ತದೆ.

ಋಷಿ ಯಾಜ್ಞವಲ್ಕ್ಯನೂ ಈ ಮಾತನ್ನು ಪುಷ್ಟೀಕರಿಸುತ್ತಾನೆ.

ದೈವೇ ಪುರುಷಕಾರೇ ಚ ಕರ್ಮಸಿದ್ಧಿರ್ವ್ಯವಸ್ಥಿತಾ ।
ತತ್ರ ದೈವಮಭಿವ್ಯಕ್ತಂ ಪೌರುಷಂ ಪೂರ್ವದೇಹಿಕಂ ॥

(ಯಾವ ಕೆಲಸ ಆಗುವುದೂ ದೈವ ಅಥವಾ ಅದೃಷ್ಟ ಹಾಗೂ ಪುರುಷ ಪ್ರಯತ್ನದಿಂದಲೇ ಪೂರ್ವಜನ್ಮದಲ್ಲಿ ಗಳಿಸಿದ ಪುರುಷ ಶಕ್ತಿಯೇ ದೈವ ಅಥವಾ ಅದೃಷ್ಟ ಎನ್ನುತ್ತಾರೆ)

ಪ್ರಯತ್ನ ಎಂಬುದು ಮನುಷ್ಯನ ಸಾಧನೆ. ಫಲ ಇದರ ಪ್ರತೀಕ. ಅದು ದೈವಕೃಪೆಯಾಗಿ ಭಟ್ಟಿ ಇಳಿಯುತ್ತದೆ.

ಮರಳಿಯತ್ನವ ಮಾಡು. ಸೋತಾಗ, ಕುಸಿದಾಗ ಮತ್ತೆ ಮತ್ತೆ ಮಾಡುವ ಪ್ರಯತ್ನದಿಂದಲೇ ಯಶಸ್ಸು ಸಿಗುತ್ತದೆ. ಬಿದ್ದವನು ಎದ್ದು ನಿಲ್ಲುತ್ತಾನೆ.

ಪ್ರಯತ್ನ ಮಾಡುವಾಗ ಎಲ್ಲವನ್ನೂ ಮರೆತು, ತನು-ಮನಗಳನ್ನು ಒಂದಾಗಿಸಿ ಪ್ರಯತ್ನ ಮಾಡಬೇಕು. ಅಂಥ ಭಗೀರಥ ಸಾಹಸವನ್ನೇ ಪುರುಷ ಪ್ರಯತ್ನ ಎನ್ನುವುದು.

ದೈವವನ್ನು ನಂಬಿ, ಅದೃಷ್ಟವನ್ನು ಹಳಿಯುತ್ತ, ನೂರು ನೆಪಗಳನ್ನು ಮುಂದೆ ಮಾಡಿ ಕೆಲಸ ಮಾಡದ ಸೋಮಾರಿಗಳು ದುರ್ಬಲರು, ದರಿದ್ರರು, ಹೇಡಿಗಳು ಮೊದಲಾದವರೆಲ್ಲ ಸಮಾಜಕ್ಕೆ ಭಾರವಾಗುವವರು.

ಪುರುಷ ಪ್ರಯತ್ನ ಮುಂದುವರಿಸುತ್ತ ಹೋದರೆ ದೈವಕೃಪೆ ತನ್ನಷ್ಟಕ್ಕೆ ಆಗಿಯೇ ಆಗುತ್ತದೆ. ಆ ಪುರುಷ ಪ್ರಯತ್ನದ ಹಿಂದೆ ಮಾತ್ರ ಸ್ವಾರ್ಥ ಇರಬಾರದು. ಪ್ರಾಮಾಣಿಕ ಕಳಕಳಿ ಅತಿ ಅಗತ್ಯ. ಅದರಲ್ಲಿ ಸಮರ್ಪಣಭಾವ ಇರಬೇಕು.

ಅಂಥ ಪುರುಷ ಪ್ರಯತ್ನಕ್ಕೆ ಯಶಸ್ಸು, ಮಾನ್ಯತೆ, ಗೌರವ ಕಟ್ಟಿಟ್ಟ ಬುತ್ತಿ.



# ಸದ್ವಿಚಾರ ಪ್ರೇರಣೆ

**ಈ** ಕತೆಯನ್ನು ಹೇಳಿದವರು ಭೂದಾನ ಚಳುವಳಿಯ ನೇತಾರ ವಿನೋಬಾ ಭಾವೆ.

ವಿನೋಬಾರವರು ಪಾದಯಾತ್ರೆ ಮಾಡುತ್ತಿದ್ದಾಗ ಒಮ್ಮೆ ಒಬ್ಬ ಯೂರೋಪಿಯನ್ ಸದ್ಗೃಹಸ್ಥರು ಒಂದು ನೆನಪಿನ ಕಾಣಿಕೆಯನ್ನು ಕೊಟ್ಟರು. ಅದೊಂದು ಪುಟ್ಟ ಮುದ್ರಿತ ಕಾರ್ಡು. ಅದರಲ್ಲಿ ಒಂದು ಸುಂದರ ಸುಭಾಷಿತ ಮುದ್ರಿತವಾಗಿತ್ತು.

'ನಿಮ್ಮ ವಿಚಾರವೇನು? ನಿಮ್ಮ ಧರ್ಮ ಯಾವುದು? ಎಂದು ನಾನು

ನಿಮ್ಮಲ್ಲಿ ಕೇಳುವುದಿಲ್ಲ, ನಿಮ್ಮ ಕಷ್ಟ ಯಾವುದು? ಎಂದು ಕೇಳುತ್ತೇನೆ'

- ಲೂಯಿ ಪ್ಯಾಶ್ಚರ್

ಲೂಯಿ ಪಾಶ್ಚರ್ ಪ್ರಸಿದ್ಧ ಫ್ರೆಂಚ್ ವಿಜ್ಞಾನಿ. ಹಲವು ಸೋಂಕುರೋಗಗಳಿಗೆ ಮದ್ದು ಹುಡುಕಿ ತೆಗೆದು ಪರಿಹಾರ ಸೂಚಿಸಿದ ಆಧುನಿಕ ಮಹಾ ಋಷಿ. ಜಗತ್ತಿನ ದುಃಖ ಕಡಿಮೆ ಮಾಡಿದ ಹರಿಕಾರ.

ಪ್ಯಾಶ್ಚರ್ ಯಾವ ಧರ್ಮ, ಜಾತಿ, ಸಿದ್ಧಾಂತಗಳಲ್ಲೂ ಕೈಹಾಕಲಿಲ್ಲ. ಜನರ ಕಷ್ಟ ಪರಿಹಾರವಾಗಬೇಕು. ಜನರ ನೋವು ಕಡಿಮೆ ಮಾಡಬೇಕು ಎಂಬ ಕಳಕಳಿ ಮತ್ತು ಪ್ರಾಮಾಣಿಕ ಪ್ರಯತ್ನವನ್ನು ಅವನು ಮಾಡಿ ಯಶಸ್ವಿಯಾದನು.. ಅದೇ ಅವನ ಜೀವನದ ಏಕಮಾತ್ರ ಆದರ್ಶವಾಗಿತ್ತು.

ಫ್ರಾನ್ಸಿಗೆ ಹೋಗಿ ಅವರಿಗೆ ಅತ್ಯಂತ ಪ್ರೀತಿಯ ಮೂರು ಮಂದಿಗಳ ಹೆಸರು ಸೂಚಿಸಲು ಕೇಳಿದರೆ ಅವರು ಹೇಳುವ ಹೆಸರುಗಳು -

1) ಲೂಯಿ ಪ್ಯಾಶ್ಚರ್
2) ವಿಕ್ಟರ್ ಹ್ಯೂಗೊ
3) ನೆಪೋಲಿಯನ್ ಬೋನಪಾರ್ಟ

ಮೊದಲನೆಯವನು ವಿಜ್ಞಾನಿ. ಎರಡನೆಯವನು ಸಾಹಿತಿ. ಮೂರನೆಯವನು ಏಕಸತ್ತಾಧಿಕಾರಿ ರಾಜಕಾರಣಿ, ಯೋಧ.

ಸಾಹಿತಿಯಾದವನು ತನ್ನ ವಿಚಾರ, ಸಿದ್ಧಾಂತ, ಪೂರ್ವಗ್ರಹಗಳನ್ನು ಇತರರ ಮನಸ್ಸಿನಲ್ಲಿ ತುರುಕಲು ಪ್ರಯತ್ನಿಸುತ್ತಾನೆ. ರಾಜಕಾರಣಿ ಅಧಿಕಾರ ಪ್ರಿಯ. ಆದರೆ ವಿಜ್ಞಾನಿ ಮುಖ್ಯವಾಗಿ ಪ್ಯಾಶ್ಚರ್‌ನಂಥ ಸರಳ, ನಮ್ರ ವಿಜ್ಞಾನಿ-ಜನರ ದುಃಖ ಕಡಿಮೆ ಮಾಡುವುದು ಹೇಗೆ ಎಂಬ ಒಂದೇ ಕಾರಣಕ್ಕಾಗಿ ತನ್ನ ಆಯ್ಕೆ ನಡೆಸುತ್ತಾನೆ.

ಜನರ ನೋವು, ದುಃಖ ಕಡಿಮೆ ಮಾಡುವುದು ಅತ್ಯಂತ ದೊಡ್ಡ ರೀತಿಯ ಮಹತ್ವದ ಸೇವೆಯೇ ಸರಿ. ಇನ್ನೊಬ್ಬರ ಮನಸ್ಸಿಗೆ ಶಾಂತಿ ಕೊಡುವ ಕೆಲಸ ಅತ್ಯಂತ ಪುಣ್ಯದಾಯಕ. ಸಂತೋಷದಾಯಕ. ಅದಕ್ಕಾಗಿ ಮಾನವೀಯ ಕಳಕಳಿ ಬಹಳ ಮುಖ್ಯವಾಗುತ್ತದೆ. ಈ ತುಡಿತವೇ ಇತ್ಯಾತ್ಮಕ ವಿಚಾರಗಳಿಗೆ ಪ್ರೇರಣೆ ಕೊಡುತ್ತದೆ.

ಇನ್ನೊಬ್ಬರಿಗೆ ಸೇವೆ, ಸೌಲಭ್ಯ ಕೊಟ್ಟು ನಾವು ಸುಖಪಡುವುದು ಒಂದು ದೈವಿಕ ಗುಣ. ಸಾಮಾನ್ಯವಾಗಿ ಇನ್ನೊಬ್ಬರ ಸೌಲಭ್ಯ, ಸ್ವಾತಂತ್ರ್ಯ ಇವುಗಳನ್ನು ಕಸಿದುಕೊಂಡು ರಾಕ್ಷಸೀ ಆನಂದ ಪಡುವ ಜನರೇ ಬಹುಸಂಖ್ಯೆಯಲ್ಲಿದ್ದಾರೆ.

ಇತರರ ದುಃಖ ಮತ್ತು ನೋವನ್ನು ಕಡಿಮೆಗೊಳಿಸಿದಾಗ ಆಗುವ ಆನಂದಕ್ಕೆ ಬೆಲೆ ಕಟ್ಟಲು ಸಾಧ್ಯವಿಲ್ಲ. ಅದೇ ನಿಜವಾದ, ಅಪ್ಪಟ ಧರ್ಮ.

ನಮ್ಮ ಪರಿಶ್ರಮದಿಂದ ಇನ್ನೊಬ್ಬರನ್ನು ಸುಖವಾಗಿಡುವುದು, ಆ ಕೆಲಸದಲ್ಲಿ ಯಾವ ಪ್ರತಿಫಲವನ್ನೂ ಅಪೇಕ್ಷಿಸದೆ ಸಂಯಮದಲ್ಲಿರುವುದು ಅತ್ಯಮೂಲ್ಯ ಗುಣಗಳು.

ಸೇವಾಭಾವದಿಂದ ಒಳ್ಳೆಯ ಕೆಲಸಗಳನ್ನು, ತ್ಯಾಗವನ್ನು ಮಾಡುತ್ತಿದ್ದಂತೆ ಸದ್ವಿಚಾರ ಪ್ರೇರಣೆ ಪಡೆಯುವುದು, ಅದನ್ನು ಇತರ ಸಮಾನ ವಿಚಾರ ಇರುವವರೊಡನೆ ಹಂಚಿಕೊಳ್ಳುವುದು ಬಲು ಸುಖದಾಯಕ.

ಅಂಥ ಪ್ರೇರಣೆ ಬದುಕಿನ ಉದಾತ್ತ, ವಿಶಾಲ ಭಾವನೆಗಳಿಗೆ ರೆಕ್ಕೆ ಕಟ್ಟುತ್ತದೆ.



# ಸಮತೋಲ

ಬದುಕು ಒಂದು ಗಡಿಯಾರದ ಲೋಲಾಕಿನಂತೆ ತೀವ್ರವಾಗಿ ಆ ಕಡೆಯಿಂದ ಈ ಕಡೆಗೆ ಚಲಿಸುತ್ತಲೇ ಇರುತ್ತದೆ.

ಮಾನವನ ಇಡೀ ಬದುಕಿನ ಸಾಧನೆಯೇ ತನ್ನ ಜೀವನವನ್ನು ಸಮತೋಲದಲ್ಲಿಡಲು ಪ್ರಯತ್ನ ಮಾಡುವುದು. ಜೀವನದ ಜಂಜಾಟದಲ್ಲಿ ಮದ್ದಳೆಯೊಳಗಣ ಇಲಿಯಂತೆ ಅತ್ತ-ಇತ್ತ ಅಧೀರನಾಗಿ, ಅಸಹಾಯಕನಾಗಿ ಬದುಕುವುದು ಒಂದು ಬದುಕು ಅಲ್ಲ.

ಕುಡುಕನು ಕೂಡ ತೂರಾಡಿ ಮಾಲುವುದು ಸಮತೋಲ ಕಾಪಾಡಿಕೊಳ್ಳಲು ಮಾಡುವ ಪ್ರಯತ್ನವೆ.

ರಾಮಕೃಷ್ಣ ಪರಮಹಂಸರು ಶಾಂತ ವಾತಾವರಣದಲ್ಲಿ ಧ್ಯಾನಸ್ಥರಾಗಿ ಕೂತಿದ್ದರು. ಇದ್ದಕ್ಕಿದ್ದಂತೆ ಅವರ ಶಿಷ್ಯನೊಬ್ಬ ಓಡಿ ಬಂದು -

''ಗುರುಗಳೇ ಇಂದು ಬೆಳಗ್ಗೆ ನದಿಯ ಬಳಿ ಹೋದಾಗ ಅಲ್ಲೊಬ್ಬ ನಿಮ್ಮನ್ನು ನಿಂದಿಸುವ ಮಾತುಗಳನ್ನು ಆಡುತ್ತಿದ್ದನು'' ಎಂದ. ಪರಮಹಂಸರು ಕೂಡಲೇ ''ನೀನೇಕೆ ಸುಮ್ಮನಿದ್ದೆ? ಗುರುನಿಂದೆಯನ್ನು ಕೇಳಿದಾಕ್ಷಣ ಅವನಿಗೆ ಕಪಾಳಮೋಕ್ಷ ಮಾಡಲಿಲ್ಲವೇಕೆ?'' ಎಂದು ಗದರಿಸಿದರು.

ಶಿಷ್ಯ ತಬ್ಬಿಬ್ಬು. ''ನನಗೆ ಅದು ಹೊಳೆಯಲಿಲ್ಲ ಗುರುಗಳೆ, ಕ್ಷಮಿಸಿ'' ಎಂದ.

ಇನ್ನೊಮ್ಮೆ ಬೇರೊಬ್ಬ ಶಿಷ್ಯ ಪರಮಹಂಸರಲ್ಲಿ ಬಂದು ''ಸ್ವಾಮೀ, ನಿಮ್ಮನ್ನು ಇನ್ನೂ ಒಬ್ಬ ಬಯ್ಯುತ್ತಿದ್ದ'' ಎಂದ.

''ಆಗ, ನೀನೇನು ಮಾಡಿದೆ?'' ಎಂದು ಪರಮಹಂಸರು ನಗುತ್ತ ಸಹಜವಾಗಿ ಎಂಬಂತೆ ಕೇಳಿದರು.

''ನಾನು ಅವನ ಕಪಾಳಕ್ಕೆ ಎರಡು ಬಿಗಿದು ಬಿಟ್ಟೆ'' ಎಂದು ತನ್ನ ಸಾಹಸ ಹೇಳಿದ.

"ಅಯ್ಯೋ, ನೀನೆಂಥ ತಪ್ಪು ಮಾಡಿದೆ? ಇನ್ನೊಬ್ಬರು ನಮ್ಮನ್ನು ಹಾಗೆ ನಿಂದಿಸುವಾಗ ಶಾಂತ ರೀತಿಯಿಂದ ಕೇಳಿಕೊಂಡು ಸುಮ್ಮನಾಗಬೇಕು. ಅದು ನಮ್ಮ ಧರ್ಮ. ಇನ್ನು ಹೀಗೆ ಮಾಡಬೇಡ" ಎಂದು ಪರಮಹಂಸರು ಸಮಜಾಯಿಷಿ ಧ್ವನಿಯಲ್ಲಿ ಹೇಳಿದರು.

ಈ ಹಿಂದಿನ ಮತ್ತು ಇಂದಿನ ಪ್ರಕರಣ ಇವೆರಡನ್ನೂ ಗಮನಿಸಿದ ಮೂರನೆಯ ಶಿಷ್ಯ ಗುರುಗಳ ಈ ವಿಕ್ಷಿಪ್ತ ನ್ಯಾಯ ಕೇಳಿ ವಿಸ್ಮಿತನಾದ. ಈ ವಿರೋಧಾಭಾಸ ಅವನಿಗೆ ಅರ್ಥವಾಗಲಿಲ್ಲ. ಅವನು ಗುರುಗಳ ಬಳಿ ಹೋಗಿ ಕೇಳಿದ.

ಪರಮಹಂಸರು ದಿವ್ಯವಾಗಿ ನಕ್ಕರು.

"ಅಯ್ಯೋ ಮಗು, ನನ್ನ ಪ್ರೀತಿಯ ಶಿಷ್ಯರಿಗೆ ಒಳ್ಳೆಯದಾಗಲಿ ಎಂದೇ ನಾನು ಹೀಗೆ ಮಾಡಿದ್ದು, ಗೊತ್ತಾಯಿತೆ? ಅದುವೆ ನನ್ನ ಅಂತಃಕರಣದ ಉದ್ದೇಶ." ಎಂದು ಬಿಟ್ಟರು.

ಒಗಟಿನಂತಿದ್ದ ಅವರ ಮಾತು ಶಿಷ್ಯನಿಗೆ ಅರ್ಥವಾಗಲಿಲ್ಲ. ಅವನ ಮುಖದಲ್ಲಿ ಪ್ರಶ್ನೆಯಿತ್ತು. ಪರಮಹಂಸರು ಹೇಳಿದರು.

"ನನ್ನ ಉದ್ದೇಶ ಇಷ್ಟೆ. ಹೇಡಿ ಧೀರನಾಗಬೇಕು. ಅವಸರದಿಂದ ಕಾದಾಟಕ್ಕೆ ಇಳಿಯುವವನು ಸಮಾಧಾನಿಯಾಗಬೇಕು. ಯಾವುದೂ ಅತಿಯಾಗಬಾರದು. ಮನುಷ್ಯನ ಜೀವನದಲ್ಲಿ ಸಮತೋಲ ಇರಬೇಕು"

ನಮ್ಮಲ್ಲಿರುವಂಥ ತೀವ್ರ ಗುಣಗಳನ್ನು ನಾವೇ ಗಮನಿಸಿ, ವಿಮರ್ಶಿಸಿ ತಿದ್ದಿಕೊಂಡು ಸಮತೋಲ ಕಾಪಾಡಿಕೊಳ್ಳಬೇಕು. ಅಂದರೆ ನಾವು ನಮ್ಮ ನಿಯಂತ್ರಣದಲ್ಲಿರಬೇಕು. ನಮ್ಮ ಮನಸ್ಸು ನಮ್ಮ ಅಂಕಿತದಲ್ಲಿರಬೇಕು. ಅದೇ ಬದುಕಿನ ದೊಡ್ಡ ಸಾಧನೆ.



# ಬಂತು ಶ್ರಾವಣ

**ಕ**ವಿ ಬೇಂದ್ರೆ 'ಬಂತು ಶ್ರಾವಣ' ಹಾಡಿದ್ದರು. ಕವಿಯೇನು, ಇಡೀ ನಿಸರ್ಗ ರಮಣಿ ಹಸುರುಸೀರೆ ಉಟ್ಟು ಕುಣಿದು ಕುಪ್ಪಳಿಸಿ ಹಾಡುತ್ತಾಳೆ.

ಶ್ರಾವಣಕ್ಕೂ ನಮಗೂ ಏನು ಸಂಬಂಧ?

ನಿಸರ್ಗದ ಮಕ್ಕಳು ಈ ತಿಂಗಳಲ್ಲಿ ಹಾಡುತ್ತಾರೆ. ಕುಣಿಯುತ್ತಾರೆ. ಹಬ್ಬ ಆಚರಿಸುತ್ತಾರೆ. ಈ ಇಡೀ ತಿಂಗಳಲ್ಲಿ ಪ್ರತಿ ದಿನ ಎಂಬಂತೆ ಹಬ್ಬ ಹರಿದಿನಗಳಿರುತ್ತವೆ.

ಈ ತಿಂಗಳ ಹುಣ್ಣಿಮೆಯ ಹತ್ತಿರ ಹತ್ತಿರ ಶ್ರವಣ ನಕ್ಷತ್ರ ಇರುತ್ತದೆ ಎಂದೇ ಈ ಹೆಸರು. ಚೈತ್ರಾದಿ ತಿಂಗಳ ಬಳಿಕ ಇದು ಐದನೆಯ ಮಾಸ. ಒಳ್ಳೆಯ ಮಳೆಗಾಲ, ಎಲ್ಲೆಲ್ಲೂ ತಂಪು, ತಂಪು.

ಸಾಮಾಜಿಕ ಆತ್ಮೀಯತೆಯನ್ನು, ಬಾಂಧವ್ಯವನ್ನು, ಧಾರ್ಮಿಕವಾಗಿ ತೋರಿಸುವುದು ನಮ್ಮ ಹಬ್ಬಗಳ ವೈಶಿಷ್ಟ್ಯ. ಶುಕ್ರವಾರ ಲಕ್ಷ್ಮೀಪೂಜೆ, ಮಂಗಳ ಗೌರೀವ್ರತ, ಸುಮಂಗಲೆಯರಿಗೆ ಹಳದಿ ಕುಂಕುಮ ಕೊಡುವುದು, ನಾಗರ ಪಂಚಮಿ, ಸಮುದ್ರ ಪೂಜೆ, ರಕ್ಷಾಬಂಧನ, ಆದಿತ್ಯ ಪೂಜೆ, ಶನಿ ಆರಾಧನೆ ಹೀಗೆ ಹಲವು ಬಗೆಗಳಲ್ಲಿ ಮಾನಸಿಕ ಶಾಂತಿ ದೊರಕಿಸಿಕೊಳ್ಳುವ ಪ್ರಯತ್ನಗಳು ನಡೆಯುತ್ತವೆ.

ಕೃಷಿಕರು, ಸುಮಂಗಲೆಯರು, ಸಂನ್ಯಾಸಿಗಳು, ಗೃಹಸ್ಥಾಶ್ರಮಿಗಳು - ಎಲ್ಲರೂ ಈ ತಿಂಗಳು ಒಂದಲ್ಲ ಒಂದು ವ್ರತ - ನಿಯಮದಲ್ಲಿ ನಿರತರಾಗಿರುತ್ತಾರೆ.

ಆ ದೃಷ್ಟಿಯಲ್ಲಿ ಶ್ರಾವಣ ಹೆಚ್ಚು ಅರ್ಥಪೂರ್ಣ.

ಶ್ರಾವಣವದ ಅಷ್ಟಮಿ ಶ್ರೀಕೃಷ್ಣಜನ್ಮ. ಜನ್ಮಾಷ್ಟಮಿ ಕಾಲದಲ್ಲಿ ಒಳ್ಳೆಯ ಮಳೆ, ಆಸ್ತಿಕರಿಗೆ ಪರ್ವಕಾಲ.

ಇಷ್ಟೆಲ್ಲ ಹಬ್ಬಗಳು ಪರಿಸರ ಪ್ರೇಮದಿಂದಲೇ ಬಂದುವು. ಿವುಗಳಿಗೆ ಶಾಸ್ತ್ರ, ವಿಧಿ, ನಿಯಮಗಳನ್ನು ಮತ್ತೆ ಹಾಕಿಕೊಂಡರು.

ಕೃಷಿಕರಿಗೆ ಸಕಾಲದಲ್ಲಿ ಉತ್ತಮ ಮಳೆ ಬಂದರೆ ಅದೇ ಹಬ್ಬ. ಅನೇಕ ಡೆ ಈ ತಿಂಗಳಲ್ಲಿ ಎತ್ತುಗಳನ್ನು ಶೃಂಗರಿಸಿ ಮೆರವಣಿಗೆ ಮಾಡಿ ರೈತರು ಲಿಯುತ್ತಾರೆ.

ವರಮಹಾಲಕ್ಷ್ಮೀವ್ರತ, ಸಂಪದ್ ಗೌರೀವ್ರತ, ಲಕ್ಷ್ಮೀವರ್ಧಂತಿ, ಮಂಗಳ ಗೌರೀವ್ರತ, ಗಾಯತ್ರೀ ಆರಾಧನೆ ಹೀಗೆ ಸ್ತ್ರೀಯರಿಗೆ ಮಹತ್ವ ೊಡುವ ಪ್ರಯುಕ್ತ ತಿಂಗಳಿಡೀ ಹಬ್ಬಗಳೋ ಹಬ್ಬಗಳು.

ಯತಿಗಳು ಚಾತುರ್ಮಾಸಕ್ಕೆ ಕೂತುಕೊಳ್ಳುವ ಈ ತಿಂಗಳಿನಲ್ಲಿ ುಬ್ಬಳ್ಳಿಯ ಸಿದ್ಧಾರೂಢ ಸ್ವಾಮಿಗಳ ಪುಣ್ಯದಿನ ಹಾಗೂ ಮಂತ್ರಾಲಯದ ುಹಾತ್ಮಾ ರಾಘವೇಂದ್ರ ಸ್ವಾಮಿಗಳ ಆರಾಧನೆಯೂ ನಡೆಯುತ್ತಿರುವುದು ೈಶಿಷ್ಟ್ಯ.

ಶ್ರಾವಣ ಮಾಸ ಬರೀ ಧಾರ್ಮಿಕ ವ್ರತ, ಹಬ್ಬಗಳ ತಿಂಗಳು ಮಾತ್ರವಲ್ಲ. ಎಲ್ಲರೂ ಕೂಡಿ ಸಹಕಾರದಿಂದ ಬಾಳುವ ತಿಳಿವಳಿಕೆ ನೀಡುವ ಂಗಳು. ಕೊಡಗಿನ ಕೈಲು ಮುಹೂರ್ತ, ಉತ್ತರ ಭಾರತದ ನಂದೋತ್ಸವ ಿವೆಲ್ಲ ಸಾಮರಸ್ಯದ ಸಂಕೇತಗಳು.

ರಾಧೆ ಮತ್ತು ಕೃಷ್ಣ ಪ್ರತಿಮೆ/ ಚಿತ್ರಗಳನ್ನು ಉಯ್ಯಾಲೆಯಲ್ಲಿಟ್ಟು ಮಾಡುವ ವಿಶೇಷ ಉತ್ಸವ ಈ ಸಂಭ್ರಮವನ್ನು ಹೇಳುತ್ತದೆ.

ಪ್ರಕೃತಿಯೊಂದಿಗೆ ಒಂದಾಗಿ ಬಾಳು. ಗೃಹಸ್ಥಾಶ್ರಮಿಯಾಗಿ ೊಂದಿಕೊಂಡು ಬಾಳು. ಸಂನ್ಯಾಸಿಯಾಗಿ ಅಧ್ಯಯನ ಮಾಡು ಎಂದು ಂದೇಶ ನೀಡುವ ಶ್ರಾವಣ ಒಂದು ಮಧುರ ಅಧ್ಯಾಯ.





# ನಮ್ಮ ನಾಲಿಗೆ

ಅನುಭವದ ಒಂದು ಮಾತಿದೆ.

ಜಗತ್ತನ್ನು ಜಯಿಸುವವರು ಯಾರು?

ಅದಕ್ಕೆ ಉತ್ತರ-ಮನಸ್ಸನ್ನು ಗೆದ್ದವರು ಯಾರೊ ಅವರು.

ಮನಸ್ಸಿನ ಭಾವನೆಗಳನ್ನು ಹೇಳುವುದೇ ನಮ್ಮ ನಾಲಿಗೆ. 'ಭಾಗವತ'ದಲ್ಲಿ ಒಂದು ಶ್ರೇಷ್ಠ ಮಾತಿದೆ -

'ಜಿತಂ ಸರ್ವಂ ಜಿತೇ ರಸೇ' - ನಾಲಿಗೆಯನ್ನು ಜಯಿಸಿದರೆ ಎಲ್ಲವನ್ನೂ ಜಯಿಸಿದಂತೆ.

ಹಲ್ಲುಗಳ ನಡುವೆ ನಾಲಿಗೆ ಇರುವಂತೆ ಮನುಷ್ಯನು ಬದುಕಬೇಕಾಗುತ್ತದೆ. ಆದರೆ ಆ ನಾಲಿಗೆಯ ಸಂಯಮವೇ ಜೀವನದ ಯಶಸ್ಸು - ಅಪಯಶಸ್ಸುಗಳಿಗೆ ಕಾರಣ.

ಜಿಹ್ವಾಯತ್ತೌ ವೃದ್ಧಿವಿನಾಶೌ (ಎಲ್ಲ ಏಳು ಬೀಳುಗಳಿಗೆ ನಾಲಿಗೆಯೇ ಕಾರಣ).

ಪ್ರತಿದಿನ ಪತ್ರಿಕೆಯಲ್ಲಿ ಓದುತ್ತೇವೆ. ಮನುಷ್ಯನ ನಾಲಿಗೆ ಎಂಥ ಖುಷಿ ಕೊಡುತ್ತದೆ. ಎಂಥ ದುರಂತ ತರುತ್ತದೆ!

ಮನುಷ್ಯ ಬುದ್ಧಿವಂತ ಅಥವಾ ಮೂರ್ಖ ಎನಿಸುವುದು ಅವನ ನಾಲಿಗೆಯಿಂದಲೇ.

ಮೂರ್ಖನ ನಾಲಿಗೆಯ ಬಗ್ಗೆಯೇ ಹಲವಾರು ವ್ಯಾಖ್ಯಾನಗಳಿವೆ.

ಅಂಥ ಜಿಹ್ವಾಚಾಪಲ್ಯ ಹಾಗೂ ಜಿಹ್ವಾ ಅಪಘಾತಗಳಿಂದ ನಾವು ತಪ್ಪಿಸಿಕೊಳ್ಳಬೇಕು. ಅದೇ ಜೀವನದ ಒಂದು ರಹಸ್ಯ.

ಮೂರ್ಖನ ಹೃದಯ ನಾಲಿಗೆಯ ಮೇಲಿರುತ್ತದೆ. ಆದರೆ ಜ್ಞಾನಿಯ ಹೃದಯಕ್ಕೆ ನಾಲಿಗೆಯೇ ಇಲ್ಲ. ಕೆಲವರು ಬಡ ಬಡ ಎಂದು ಮಾತನಾಡುತ್ತಾರೆ. ಅವರ ಹೃದಯ ನಿರ್ಮಲವಾಗಿದ್ದರೂ ಲೋಕವು ಅಂಥವರ ನಾಲಿಗೆಯನ್ನು ದೂರುತ್ತದೆ. ಮನಸ್ಸಿನ ನಿಗೂಢತನವನ್ನು ಕಂಡು ಹುಡುಕುವವರು ಯಾರು?

ನಾಲಿಗೆಯ ಮಾತಿಗೆ ಸ್ಟಾಂಪ್‌ಪೇಪರಿಗಿಂತ ಹೆಚ್ಚಿನ ಬೆಲೆ ಇದೆ. ಮಾತು ಕೊಟ್ಟವರು ಮರೆಯಬಾರದು. ನಾಲಿಗೆ ಮತ್ತು ಮಾತಿನ ಬಗ್ಗೆ ಎಷ್ಟೊಂದು ಜಾಣ ನುಡಿಗಳು!

ದುರ್ಜನರಿಗೆ ಒಂದೇ ನಾಲಿಗೆ ಅಲ್ಲ. ಅವರ ನಾಲಿಗೆಗಳಿಗೆ ಲೆಕ್ಕವೇ ಇಲ್ಲ. ಅದಕ್ಕೆ ನಿಯಮ, ನಿಯಂತ್ರಣ, ಲಗಾಮು ಯಾವುದೂ ಇಲ್ಲ.

ಇಡೀ ಜಗತ್ತನ್ನು ನಿಯಂತ್ರಿಸುವುದು ನಮ್ಮ ಮನಸ್ಸು. ಈ ಮನಸ್ಸಿನ 'ಲೌಡ್ ಸ್ಪೀಕರ್' ನಮ್ಮ ನಾಲಿಗೆ.

ಜಿಹ್ವಾ ಚಾಪಲ್ಯ ಹೇಗೆ ದೇಹದ ಆರೋಗ್ಯ - ರೋಗಗಳಿಗೆ ಕಾರಣವೋ ಮನುಷ್ಯನ ಬದುಕನ್ನು ರೂಪಿಸುವುದೂ ನಾಲಿಗೆಯೆ.

ಅನೇಕ ಬಾರಿ ಗೋಮುಖವ್ಯಾಘ್ರರ ನಾಲಿಗೆಯ ರೀತಿ - ನೀತಿಯೇ ಒಂದು ಚಿರಂತನ ರಹಸ್ಯ.

ನಾಲಿಗೆಯೇ ಅಮೃತ. ನಾಲಿಗೆಯೇ ವಿಷ. ಅದರ ಕಡಿವಾಣ ನಮ್ಮ ಕೈಯಲ್ಲಿ.



# ಮಿತ್ರ

**ಜೀ**ವನದಲ್ಲಿ ಒಳ್ಳೆಯ ಮಿತ್ರರನ್ನು ಪಡೆದವರೇ ಅದೃಷ್ಟಶಾಲಿಗಳು. ಪಂಚತಂತ್ರದಲ್ಲಿ ಒಂದು ಒಳ್ಳೆಯ ಮಾತಿದೆ -

*ಮಿತ್ರವಾನ್ಸಾಧಯತ್ಯರ್ಥಾನ್ ದುಸ್ಸಾಧ್ಯಾನಪಿ ವೈ ಯತಃ ।*

*ತಸ್ಮಾನ್ಮಿತ್ರಾಣಿ ಕುರ್ವೀತ ಸಮಾನಾನ್ಯೇವ ಚಾತ್ಮನಃ ॥*

(ಮಿತ್ರರನ್ನು ಪಡೆದವನು ಅಸಾಧ್ಯವಾದ ಕಾರ್ಯವನ್ನೂ ಮಾಡುತ್ತಾನೆ. ಅದು ಅವನಿಗೆ ಸಾಧ್ಯವಾಗುತ್ತದೆ. ಆದುದರಿಂದ ಸರಿಯಾದವರನ್ನೇ ಸ್ನೇಹಿತರನ್ನಾಗಿ ಆರಿಸಬೇಕು)



ನಿಜವಾದ ಮಿತ್ರನ ಲಕ್ಷಣಗಳೇನು? ಅವನು ನಿಷ್ಕಪಟಿಯಾಗಿರಬೇಕು. ಸ್ನೇಹಿತನ ಹಿತವನ್ನೇ ಮನಸ್ಸಿನಲ್ಲಿ ತನ್ನ ಹಿತವೆಂದು ಬಗೆಯಬೇಕು. ಪ್ರೀತಿಯೇ ಮೈತ್ರಿಯ ತಂತು.

ಇನ್ನೊಬ್ಬನಿಂದ ಲಾಭವನ್ನು, ಧನವನ್ನು ಇತರ ಕಾಮನೆಗಳನ್ನು ಬಯಸುವವನು ಎಂದೂ ಮಿತ್ರನಾಗಲಾರ. ಅದು ಕೇವಲ ಮೈತ್ರಿಯ ನಾಟಕ. ಅದರಲ್ಲಿ ಮೋಸಗಾರಿಕೆ, ಸಮಯಸಾಧಕತನ, ನಂಬಿಸಿ, ವಂಚನೆ ಮಾಡುವುದೇ ಹೆಚ್ಚು. ಅಂಥವರು ಎಂದೂ ಮಿತ್ರರಾಗಲಾರರು. ಮಾತ್ರವಲ್ಲ ಅತಿ ನೀಚ ಶತ್ರುವಿಗಿಂತಲೂ ಕಳಪೆ ಎನ್ನುತ್ತಾರೆ ಶಾಸ್ತ್ರಕಾರರು.

'ನೀತಿಸಾರ' (ಬೃಹಸ್ಪತಿ) ದಲ್ಲಿ ಬರುವ ಮಾತಿದು -

*ಮಿತ್ರೇಣ ಕಿಂ ವ್ಯಸನಕಾಲಪರಾಙ್ಮುಖೇನ.*

(ಕಷ್ಟಕಾಲದಲ್ಲಿ ಮುಖ ಮರೆಸಿದ ಮಿತ್ರನಿಂದೇನು ಸುಖ?) ಅಂಥ ಮಿತ್ರನು ನಿಜವಾದ ಮಿತ್ರನಲ್ಲವೇ ಅಲ್ಲ.

ಗೆಳೆಯನಿಗಾಗಿ ಪ್ರಾಣ ಬಿಟ್ಟವರು ಬಲು ದುರ್ಲಭರು. ಅತಿ ವಿರಳ ಎನ್ನುತ್ತದೆ 'ಕಥಾಸರಿತ್ಸಾಗರ'

ಅನೇಕರು ನಮ್ಮನ್ನು ಹೊಗಳುತ್ತಾರೆ. ಮುಖಸ್ತುತಿ ಮಾಡುತ್ತಾರೆ. ಇಂದ್ರಚಂದ್ರ ಎಂದು ಅಟ್ಟಕ್ಕೇರಿಸುತ್ತಾರೆ. ಅವರೆಂದೂ ಮಿತ್ರರಾಗಲು ಸಾಧ್ಯವೇ ಇಲ್ಲ. ಇಂಥ ಸುಳ್ಳು ಹೊಗಳಿಕೆ ಬಲು ಅಪಾಯಕಾರಿ. ಅದು ನಮ್ಮ ಶತ್ರುವು ನಮಗಾಗಿ ನಿರ್ಮಿಸಿರುವ ಖೆಡ್ಡಾ.

ಆದರೆ ಪುಣ್ಯವಂತರೂ ಇದ್ದಾರೆ. ಹಳೆಯ ಮಿತ್ರನೊಂದಿಗೆ ಕೂತು, ಸವಿನೆನಪುಗಳ ಸುರುಳಿಯನ್ನು ಬಿಚ್ಚುತ್ತ, ಮೆಲುಕಾಡುತ್ತ, ಊಟ-ತಿಂಡಿ ಮಾಡುವುದು ಎಷ್ಟು ಸುಖ? ಅದೊಂದು ಭಾಗ್ಯವೂ ಹೌದು.

ಜೀವನದಲ್ಲಿ ಇದು ಅನೇಕರ ಅನುಭವ. ಗೆಳೆಯರೇ ಅವರನ್ನು ರಕ್ಷಿಸುವವರು. ಒಳ್ಳೆಯ ಗೆಳೆಯರನ್ನು ಪಡೆದವನು ಎಂದೂ ದುಃಖ ಪಡಲಾರ. ನಿಜವಾದ ಪ್ರಾಣಮಿತ್ರರು ಎಂದೂ ಶತ್ರುಗಳಾಗಲಾರರು. ಸ್ವಾರ್ಥದ ಬೀಜ ಚಿಗುರಿದೊಡನೆ ಮಿತ್ರತ್ವದ ಮರ ಉರುಳುತ್ತದೆ.

ಅನೇಕರು ಸ್ಥಾನಮಾನಗಳಿಗೆ ಮರ್ಯಾದೆ ಕೊಟ್ಟು ಮಿತ್ರನೆಂದು ನಟಿಸುವುದುಂಟು. ಸ್ಥಾನ ಕಳಕೊಂಡ ಕೂಡಲೇ ಈ 'ಮಿತ್ರ' ಶತ್ರು ಆಗುತ್ತಾನೆ! ಇದು ಸ್ವಾರ್ಥ. ಇದು ವ್ಯಾಪಾರ. ಇದು ಶೋಷಣೆ. ಎಲ್ಲ ಮಿತ್ರತ್ವದ ಹೆಸರಲ್ಲಿ.

ಮೈತ್ರಿಯ ಮೂಲ ಸೂತ್ರ ತ್ಯಾಗ ಮತ್ತು ಪ್ರೇಮ. ಅಂಥ ಗೆಳೆಯರನ್ನು ಪಡೆಯುವುದಕ್ಕೂ ಆ ಮೈತ್ರಿ ಸುಸೂತ್ರವಾಗಿ ಮುಂದುವರಿಯಲಿಕ್ಕೂ ದೈವಕೃಪೆ ಬೇಕು.

ಇಬ್ಬರು ಮಿತ್ರರ ನಡುವೆ ತಕರಾರು ತಂದಿಡುವ ಶಕುನಿಗಳೂ ಇರುತ್ತಾರೆ. ಆದುದರಿಂದ ಗೆಳೆತನ ಎಂಬುದು ಬಲು ಸೂಕ್ಷ್ಮ. ಅದನ್ನು ಕಾಪಾಡಿಕೊಂಡವನೇ ಜಾಣ.



# ಪಂಚಮಹಾಯಜ್ಞ

**ಚೆ**ನ್ನಾಗಿ ಸಂಸಾರ ಮಾಡಿಕೊಂಡು ಗೃಹಸ್ಥಾಶ್ರಮದಲ್ಲಿರುವವರು ಪಂಚಮಹಾಯಜ್ಞ ಮಾಡಬೇಕು ಎಂದು ಮನುಸ್ಮೃತಿಯಾದಿಯಾಗಿ ಅನೇಕ ಸ್ಮೃತಿಗಳು ಹೇಳಿವೆ. ಈ ಐದು ಮಹಾಯಜ್ಞಗಳು ಯಾವುವು?

*ಅಧ್ಯಾಪನಂ ಬ್ರಹ್ಮಯಜ್ಞಃ ಪಿತೃಯಜ್ಞಸ್ತು ತರ್ಪಣಮ್ ।*
*ಹೋಮೋ ದೈವೋ ಬಲಿರ್ಭೂತೋ ನೃಯಜ್ಞೋऽತಿಥಿಪೂಜನಮ್ ॥*

ಮನುಋಷಿಯ ಕಾಲದ ಗೊಡ್ಡು ಶಾಸ್ತ್ರ ಎಂದು ಇದನ್ನು ಅವಹೇಳನ ಮಾಡುವವರೂ ಇಂದು ಇರಬಹುದು. ಆದರೆ ಇದರ ಸೂಕ್ಷ್ಮ ಮನೋಧರ್ಮವನ್ನು ಗ್ರಹಿಸಿ, ಇದನ್ನು ಇಂದಿನ ಪರಿಸ್ಥಿತಿಗೆ ಸರಿಯಾಗಿ ಹೊಂದಿಸಿಕೊಂಡು ಹೋದರೆ ನಮಗೇ ಲಾಭ.

ಬ್ರಹ್ಮಯಜ್ಞ : ಅಧ್ಯಾಪನ ಹಾಗೂ ಸ್ವಾಧ್ಯಾಯ ಮಾಡುವುದು ಬ್ರಹ್ಮಯಜ್ಞ. ನಮ್ಮ ಶಿಕ್ಷಕರು ಆತ್ಮಸಾಕ್ಷಿಯಾಗಿ ಈ ಮಾತನ್ನು ನೆನಪು ಮಾಡಿಕೊಳ್ಳಬೇಕು. ಅಧ್ಯಯನ ಮಾಡಿದುದರಲ್ಲಿ ಕೆಲವನ್ನು ನಿತ್ಯ ಪಠಿಸಬೇಕು. ಅದರಲ್ಲಿ ಸಾಧ್ಯವಿದ್ದಷ್ಟನ್ನು ಬದುಕಿನಲ್ಲಿ ಅನುಷ್ಠಾನಕ್ಕೆ ತರಬೇಕು. ಅಧ್ಯಾಪನದಿಂದ ಬುದ್ಧಿಗೆ ತುಕ್ಕು ಹಿಡಿಯುವುದಿಲ್ಲ. ಮನುಷ್ಯ ತನ್ನನ್ನೇ ಸಂಸ್ಕರಿಸಿಕೊಳ್ಳಲು ಇದು ಸಹಾಯಕ.

ದೇವಯಜ್ಞ : ತಾನು ಮಾಡುವ ಎಲ್ಲ ಕೆಲಸವನ್ನು ದೇವರು ಗಮನಿಸುತ್ತಾ ಇರುತ್ತಾನೆ ಎಂಬ ಸಾಕ್ಷೀಭಾವ. ತನ್ನ ಎಲ್ಲ ಕೆಲಸವೂ ದೇವರಲ್ಲಿ ಸಮರ್ಪಣ ಎಂಬ ವಿನಯ. ಇದರಿಂದ ದುರಾಸೆ ಹೆಚ್ಚುವುದಿಲ್ಲ. ಮನಸ್ಸಿಗೆ ಕಡಿವಾಣ ಬೀಳುತ್ತದೆ. ತನ್ನನ್ನೇ ಶುದ್ಧೀಕರಿಸಿಕೊಳ್ಳುವಂತಾಗುತ್ತದೆ.

ಪಿತೃಯಜ್ಞ : ಹಿರಿಯರಿಗೆ ಗೌರವ ತೋರಿಸುವುದು. ಪ್ರತಿದಿನ ಹಲವು ಸಂದರ್ಭಗಳಲ್ಲಿ ಗುರು, ಹಿರಿಯ, ಆಚಾರ್ಯರ ಮುಂದೆ/ ಹಿಂದೆ ಹೇಗೆ ನಡೆದುಕೊಳ್ಳಬೇಕು ಎಂಬ ಪ್ರಜ್ಞೆ. ಕೆಲಸ ಮಾಡುವ ಕಚೇರಿಯಲ್ಲಿ, ತನ್ನ ಯಜಮಾನನಲ್ಲಿ, ಹೇಗೆ ನಡೆಯಬೇಕೆಂಬ ಹೊಣೆಗಾರಿಕೆ. ಇದರಿಂದ ನಮ್ಮ ಅಹಂಕಾರ, ಆಲಸ್ಯ, ಉದಾಸೀನತೆ, ಅಲಕ್ಷ್ಯ, ಉದ್ಧಟತನಗಳು ಕಡಿಮೆ ಆಗುವ ಸಾಧ್ಯತೆ ಇದೆ.

ಭೂತಯಜ್ಞ : ಮನುಷ್ಯ ಮಾತ್ರನಲ್ಲ. ಎಲ್ಲ ಪ್ರಾಣಿಮಾತ್ರರಲ್ಲಿ ಗೌರವ ತೋರಿಸುವುದು ಸಂಸ್ಕೃತಿಯ ಲಕ್ಷಣ. ಬಸ್ಸು, ರೈಲಿನಲ್ಲಿ ಪಯಣಿಸುವಾಗ, ಕ್ಯೂನಲ್ಲಿ ನಿಲ್ಲುವಾಗ, ರಸ್ತೆಯಲ್ಲಿ ನಡೆಯುವಾಗ, ನಮ್ಮ ದ್ವಿಚಕ್ರ, ಕಾರು ಪಾರ್ಕ್ ಮಾಡುವಾಗ ನಾವು ಇನ್ನೊಬ್ಬರ ಬಗ್ಗೆ ಒಂದಿಷ್ಟು ಯೋಚಿಸಿ ಕೆಲಸ ಮಾಡಿದರೆ ಬದುಕು ಹೆಚ್ಚು ಸುಸೂತ್ರವಾಗುತ್ತದೆ. ಸಹ್ಯವಾಗುತ್ತದೆ. ಮನಸ್ಸಿನ ಈ ಸೂಕ್ಷ್ಮತನವನ್ನು ಬೆಳೆಸಿಕೊಳ್ಳುವವನೇ ಮನುಷ್ಯ.

ಮನುಷ್ಯಯಜ್ಞ : ಅತಿಥಿ, ಅಭ್ಯಾಗತರುಗಳಿಗೆ ತೋರುವ ಪ್ರೀತಿ, 'ಅತಿಥಿದೇವೋ ಭವ' ಎಂದು ಈ ನಾಡಿನಲ್ಲಿ ಆಶ್ರಿತ, ಸೇವಕ, ಪಾಲಿತರಲ್ಲೂ ಕರುಣೆ ತೋರಿಸಬೇಕು. ಈ ಮನೋಭಾವದಿಂದ ಎಷ್ಟು ಹಿತವಾಗುತ್ತದೆ ಎಂದು ಪ್ರಯೋಗ ಮಾಡಬಹುದು.

ಈ ಐದು ಯಜ್ಞಗಳಿಂದ ನಾವು ಸಮಾಜದ ಋಣವನ್ನು ತೀರಿಸಬಲ್ಲೆವು. ಪ್ರತಿಯೊಬ್ಬ ವ್ಯಕ್ತಿಯೂ ಸಮಾಜದಿಂದ ತುಂಬ ಸಹಾಯ ಪಡೆಯುತ್ತಾನೆ. ಸಮಾಜದ ನಡುವೆ ಬೆಳೆಯುತ್ತಾನೆ. ಸಮಾಜವೇ ನಮ್ಮನ್ನು ತಿದ್ದುವ ಮಹಾವಿಶ್ವವಿದ್ಯಾಲಯ. ಅದರ ಋಣ ಎಷ್ಟು ತೀರಿಸಿದರೂ ಸಾಲದು. ಅದರಿಂದ ನಮಗೆ ಹಿತವೂ ಸುಖವೂ ಆಗುತ್ತದೆ. ಆ ಪ್ರಜ್ಞೆಯೇ ಯಜ್ಞ.



# ಪರಿಪಕ್ವತೆ

**ಜೀ**ವನದಲ್ಲಿ ಪರಿಪಕ್ವ ಸ್ಥಿತಿಗೆ ಮುಟ್ಟುವುದು ಎಂದರೆ ಒಂದು ಮುಖ್ಯ ಘಟ್ಟ ತಲುಪಿದಂತೆ.

ಅನುಭವದಿಂದ ಮಾಗಿದ ಮನಸ್ಸು ಪ್ರಬುದ್ಧತೆ (ಮೆಚೂರಿಟಿ) ತಂದುಕೊಡುತ್ತದೆ.

ಪ್ರತಿಯೊಬ್ಬರೂ ತಮ್ಮ ತಮ್ಮ ಅನುಭವಗಳಿಂದಲೇ ತಮ್ಮ ತಮ್ಮ ದಾರಿಯನ್ನು ಹುಡುಕಿಕೊಳ್ಳಬೇಕು. ಪ್ರತಿಯೊಬ್ಬರ ಜೀವನವೂ ಒಂದು ಪ್ರತ್ಯೇಕ ಅನ್ವೇಷಣೆ.

ಈ ಜೀವನ ಎಷ್ಟು ಚಿಕ್ಕದು ! ಆದರೂ ದೊಡ್ಡದು, ವಿಶಾಲ !

ಅದನ್ನು ಕೋಪ, ತಾಪ, ಮತ್ಸರ, ಕ್ರೌರ್ಯ, ಸೇಡು, ಇತರರ ತಪ್ಪುಗಳನ್ನು ಹುಡುಕುವುದು, ಇತರರಿಗೆ ಬೇಕೆಂದೇ ನೋವನ್ನುಂಟು ಮಾಡುವುದು, ಇತರರ ವಸ್ತುಗಳನ್ನು ಧ್ವಂಸ ಮಾಡುವುದು, ಇತರರ ಬಗ್ಗೆ ಒಂದಿಷ್ಟೂ ತಾಳ್ಮೆ ಇಲ್ಲದಿರುವುದು, ದುರುದ್ದೇಶ, ಪೂರ್ವಗ್ರಹಗಳಿಂದ ಇನ್ನೊಬ್ಬರ ಮನ ನೋಯಿಸುವುದು... ಹೀಗೆ ಕ್ಷುಲ್ಲಕ ಕೆಲಸಗಳಲ್ಲೇ, ಬೆಲೆಯನ್ನೇ ಕಟ್ಟಲಿಕ್ಕೇ ಆಗದ ಆಯುಷ್ಯವನ್ನು ಹಾಳುಮಾಡಬೇಕೆ?

ಬದುಕಿನಲ್ಲಿ ಒಳ್ಳೆಯದನ್ನೇ ಬಯಸುವುದು. ಒಳ್ಳೆಯದನ್ನೇ ಮಾಡುವುದು. ಮೇಲೆ ವಿವರಿಸಿದ ಹಲವು ಬಗೆಯ 'ರಾಕ್ಷಸ'ರನ್ನು ಪೋಷಿಸದೆ ಇರುವುದು. ತಾಳ್ಮೆಯಿಂದ ಎಲ್ಲವನ್ನೂ ಗಮನಿಸುವುದು - ಇವೆಲ್ಲ ಪರಿಪಕ್ವತೆಯ ಲಕ್ಷಣಗಳು.

ಜೀವನದ ಸಮಗ್ರತೆಯೆಡೆಗೆ ನೋಡುವವರು ದಾರಿ ತಪ್ಪುವುದಿಲ್ಲ.

ಸಂಕುಚಿತತೆಯನ್ನೇ ವಿಶ್ವವಾಗಿ ಮಾಡಿಕೊಂಡವರು ಜಗತ್ತನ್ನು ಸುಖಿಯಾಗಿಡಲು ಬಿಡುವುದಿಲ್ಲ. ತಾವೂ ಸುಖಿಯಾಗಿರುವುದಿಲ್ಲ.

ಕೆಲಸ ಮಾಡುವವರು ಮಾಡುತ್ತಲೇ ಹೋಗುತ್ತಾರೆ. ಯಾರಿಗೋ ಕೀರ್ತಿ. ಯಾರಿಗೋ ಧನ. ಕೆಲಸದ ಆನಂದವೇ ಸಾರ್ಥಕತೆಯ ಪರಿಪಕ್ವತೆ. ಅದೇ ಮಾನಸಿಕ ಪ್ರಬುದ್ಧತೆಯ ಲಕ್ಷಣ.

ಸೂರ್ಯ ಲೋಕವನ್ನು ಬೆಳಗುತ್ತಾನೆ. ಮರವು ನೆರಳು, ಫಲ ಕೊಡುತ್ತದೆ. ಮಳೆ ಬದುಕು ಕೊಡುತ್ತದೆ. ಇವುಗಳೆಲ್ಲ ಫಲಾನುಭವಿಗಳಿಂದ ಕೃತಜ್ಞತೆಗಳನ್ನು ಅಪೇಕ್ಷಿಸುತ್ತವೆಯೇ ?

ತಾಯಿ ಮಕ್ಕಳಿಂದ 'ಥ್ಯಾಂಕ್ಸ್' ಬಯಸುತ್ತಾಳೆಯೆ?

ಸುಖ-ದುಃಖ, ಲಾಭ-ನಷ್ಟಗಳನ್ನು ಸರಿಸಮನಾಗಿ ನೋಡುವುದೇ ಪರಿಪಕ್ವತೆ.

ಕೆಲವು ಸಮಸ್ಯೆಗಳು, ನೋವು, ಸಂಕಟ, ನಿರಾಶೆ ಪರಿಪಕ್ವತೆಗೆ ಅಗತ್ಯ. ಅವುಗಳ ಬಗ್ಗೆ ಆರೋಪ ಬೇಡ.

ನಾವು ಹೇಗೆ ಬದುಕುತ್ತೇವೆ ಎಂಬುದೇ ಮುಖ್ಯ. ಎಲ್ಲವನ್ನೂ ಅಖಂಡ ಆತ್ಮವಿಶ್ವಾಸದಿಂದ ಎದುರಿಸುವುದೇ ಜೀವನದ ಸೂತ್ರ.

ಸಮತೋಲದ ಜೀವನ ಸಾಮರಸ್ಯಕ್ಕೆ ಪೂರಕ. ತಾರತಮ್ಯ ಜ್ಞಾನ ಪರಿಪಕ್ವತೆಯ ಇನ್ನೊಂದು ಮುಖ. ಯಾವುದು ಸರಿ, ಯಾವುದು ತಪ್ಪು ಎಂಬ ತೀರ್ಮಾನಕ್ಕೆ ಅನುಭವವೇ ಹಿನ್ನೆಲೆ.

ಆಗುವುದೆಲ್ಲ ಒಳ್ಳೆಯದಕ್ಕೇ ಎಂಬ ನಂಬಿಕೆ ಹೆಚ್ಚು ಶಕ್ತಿ ಕೊಡುತ್ತದೆ.

ಆದದ್ದೆಲ್ಲ ಒಳಿತೇ ಆಯಿತು... ಎಂದು ದಾಸರೇ ಹಾಡಲಿಲ್ಲವೆ?

ಸತ್ಯದೊಂದಿಗೆ ಬದುಕುವವರು ಯಾರಿಗೂ ಹೆದರಬೇಕಿಲ್ಲ.



# ಗುಣ ಗೌರವ

**ಗು**ಣ ಅಂದರೆ ಸದ್ಗುಣ. ಬದುಕಿನಲ್ಲಿ ಇದುವೇ ಪರಮೋಚ್ಚ ಆಸ್ತಿ. ಹಿರಿಯರ ಅನುಭವದ ಮಾತಿದೆ. ''ರೂಪವನ್ನು ಕೇಳಬೇಡ, ಗುಣವನ್ನು ಕೇಳು. ಕುಲವನ್ನು ಕೇಳಬೇಡ, ಶೀಲವನ್ನು ಕೇಳು.'' ಏಕೆಂದರೆ ರೂಪವನ್ನು ಒಳ್ಳೆಯ ಗುಣಗಳು ಭೂಷಿಸುತ್ತವೆ. ಕುಲವನ್ನು ಶೀಲ ಭೂಷಿಸುತ್ತದೆ.

ಗುಣಗ್ರಹಣ ಎಂದರೆ ಉತ್ತಮವಾದುದನ್ನೇ ಗ್ರಹಿಸುವ ಇತ್ಯಾತ್ಮಕ ಪ್ರವೃತ್ತಿ. ಅದನ್ನೇ

*ಗುಣತಃ ಸಂಗ್ರಹಂ ಕುರ್ಯಾದ್ದೋಷಾನಪಿ ವಿಸರ್ಜಯೇತ್*

ಎಂದು ರಾಮಾಯಣದಲ್ಲಿ ಹೇಳಿದೆ. ಸದ್ಗುಣಿಗಳ ಸಹವಾಸದಿಂದ ಕಿರಿಯರಿಗೂ ಗೌರವ ಸಿಗುತ್ತದೆ. ಸಜ್ಜನರ ಸ್ನೇಹವೇ ಜೀವನದ ಭಾಗ್ಯ ಎಂದು ಇದಕ್ಕಾಗಿ ಹೇಳುವುದು. ಗುಣಿಗಳನ್ನು ಆಶ್ರಯಿಸಿದ ನಿರ್ಗುಣಿಗಳೂ ಗುಣಿಗಳಾಗುತ್ತಾರೆ. ಇದು ಅನುಭವಸಿದ್ಧ ಮಾತು.

ಜಗತ್ತಿನಲ್ಲಿ ನಾವು ಏನು ಕಾಣುತ್ತೇವೆ? ಗುಣವಂತರು ಹೆಚ್ಚಾಗಿ ಕಷ್ಟ ಪಡುತ್ತಾರೆ. ದುಷ್ಟರು ಸುಖಪಡುತ್ತಾರೆ. ರಾಮಾಯಣ, ಮಹಾಭಾರತದ ಕತೆಗಳೂ ಇದೇ ವಿಷಯವನ್ನು ಹೇಳುತ್ತವೆ. ಗುಣಿಗಳು ಕಷ್ಟ ಪಡುತ್ತಿದ್ದಂತೆ ಪುಟಕ್ಕಿಟ್ಟ ಬಂಗಾರವಾಗುತ್ತಾರೆ. ದುರ್ಜನರು ತಮ್ಮ ಕೆಟ್ಟ ನಡತೆಯಿಂದಲೇ ನಾಶವಾಗುತ್ತಾರೆ.

ಒಳ್ಳೆಯ ಗುಣಗಳಿಂದ ಯಾರನ್ನೂ ಗೆಲ್ಲಬಹುದು. ಬಲಾತ್ಕಾರದಿಂದ ಸಾಧ್ಯವಾಗದ್ದು ಉತ್ತಮ ಗುಣಗಳಿಂದ ಸಾಧ್ಯವಾಗುತ್ತದೆ. ಪ್ರೀತಿ - ವಿಶ್ವಾಸ ಬೆಳೆಯುವುದು ಉತ್ತಮ ಗುಣಗಳಿಂದಲೆ. ಹೊಗಳಿಕೆ, ಅಧಿಕಾರ, ಮತ್ಸರ, ವೈಷಮ್ಯ, ಶ್ರೀಮಂತಿಕೆಗಳು ಕ್ಷಣಿಕ. ಅವುಗಳಿಂದ ಗುಣ ಬೆಳೆಯಲಾರದು.

ಒಂದಲ್ಲ ಒಂದು ಸಲ ಉತ್ತಮ ಗುಣಗಳನ್ನು ಸಮಾಜದ ಜನರು ಗುರುತಿಸಿಯೇ ಗುರುತಿಸುತ್ತಾರೆ. ಸಜ್ಜನರು ಗೌರವಕ್ಕೆ ಪಾತ್ರರಾಗುತ್ತಾರೆ.

ಇಡೀ ಜೀವನವನ್ನೇ ಉತ್ತಮ ಗುಣಗಳನ್ನು ಮೈಗೂಡಿಸಿಕೊಳ್ಳಲು ಬಳಸಿಕೊಳ್ಳ ಬೇಕು. ಗುಣವಂತನಾದ ಬಡವನು ದುಷ್ಟನಾದ ಶ್ರೀಮಂತನಿಗಿಂತಲೂ ಮಿಗಿಲಾದವನು.

ಯಾವುದು ದುಷ್ಟತನ? ನಿರ್ಮಲ ಹೃದಯವಂತನ ಮೇಲೆ ದೋಷಾರೋಪ ಮಾಡುವುದೇ ದುಷ್ಟ ಪ್ರವೃತ್ತಿ. ಅದು ಪರಪೀಡೆ. ಅದು ಪಾಪ.

ಒಳ್ಳೆಯ ಗುಣಗಳು ಆಕಾಶದಿಂದ ಇಳಿದು ಬರುವುದಿಲ್ಲ. ಅವನ್ನು ಪ್ರಯತ್ನ ಪೂರ್ವಕ ರೂಢಿಸಿಕೊಳ್ಳಬೇಕು. ಇದುವೇ ಜೀವನದ ಅತ್ಯುತ್ತಮ ಸಂಪಾದನೆಯಾಗುತ್ತದೆ.

ಈ ರೀತಿ ಒಳ್ಳೆಯ ಗುಣಪಕ್ಷಪಾತಿಗಳಾದವರಿಗೆ ತಮ್ಮ ಶತ್ರುಗಳ ಗುಣಗಳೂ ಕಾಣುತ್ತವೆ. ಅವರು ಎಲ್ಲರೊಡನೆ ಪ್ರೀತಿ ಬೆಳೆಸುತ್ತಾರೆ. ರಾಮನು ರಾವಣನ ಪರಾಕ್ರಮವನ್ನು ಹೊಗಳಿದ ಸನ್ನಿವೇಶ ರಾಮಾಯಣದಲ್ಲಿದೆ.

ಅನೇಕ ವೇಳೆ ದುಷ್ಟರು ಅಧಿಕಾರದಲ್ಲಿರುತ್ತಾರೆ. ಗುಣಿಗಳು ಕೆಳಗಿರುತ್ತಾರೆ. ಸಿಂಹಾಸನ(ಪೀಠ)ದಲ್ಲಿ ಕೂತುಕೊಂಡ ಕೂಡಲೇ ಯಾರೂ ಶ್ರೇಷ್ಠ ಆಗುವುದಿಲ್ಲ.

ಮನುಷ್ಯನ ಜಾತಿಗೂ ಗುಣಕ್ಕೂ ಹೆಚ್ಚು ಸಂಬಂಧವಿಲ್ಲ. ಗುಣಗಳಿಂದ ಉತ್ತಮ ವಾದವನೇ ನಿಜವಾಗಿ ಶ್ರೇಷ್ಠ. ಅವನೇ ಉತ್ತಮ ಜಾತಿಯವನು. ಎಂಥ ಗುಣಶಾಲಿಗೂ ಒಳ್ಳೆಯ ಆಶ್ರಯ, ಅವಕಾಶ ಬೇಕು. ವಜ್ರದ ಮಹತ್ತ್ವ ಅದನ್ನು ಕಟ್ಟಿದ ಬಂಗಾರದಿಂದಲೇ ಗೊತ್ತಾಗುತ್ತದೆ.

ಗುಣಗಳನ್ನು ಗ್ರಹಿಸಿ ಮೈಗೂಡಿಸಿಕೊಳ್ಳಬೇಕು. ಗುಣಗಳಿಗೆ ಗ್ರಹಣ ಹಿಡಿಯ ಬಾರದು. ಒಳ್ಳೆಯ ಗುಣಗಳಿಗೆ ಎಲ್ಲೆಡೆ ಗೌರವ ಸಿಗುತ್ತದೆ.



# ಸಂಸ್ಕಾರ

**ಮಾ**ನವನಲ್ಲಿ ಮೌಲ್ಯಗಳನ್ನು ಅಂತರ್ಗತಗೊಳಿಸುವ ಸತತ ಶುದ್ಧೀಕರಣ ಕ್ರಿಯೆಯೇ ಸಂಸ್ಕಾರ. ಅದು ಅಂತರಂಗ ಹಾಗೂ ಬಹಿರಂಗ ಶುದ್ಧಿ. ಶಾರೀರಿಕ ಮತ್ತು ಮಾನಸಿಕ ಮೌಲ್ಯವರ್ಧಕ.

ಒರಟಾಗಿ, ಬರಡಾಗಿ, ಕ್ಷುದ್ರವಾಗಿರುವುದನ್ನು ಸುಂದರವಾಗಿ, ಆಕರ್ಷಕವಾಗಿ ಮಾಡಿ ಅದರ ಬೆಲೆಯನ್ನು ಹೆಚ್ಚಿಸುವ ಈ ಕೆಲಸ ಆಯುಷ್ಯದುದ್ದಕ್ಕೂ ನಡೆಯುವಂಥದ್ದು.

ವ್ಯಕ್ತಿತ್ವದ ಪರಿಷ್ಕಾರವೇ ಸಂಸ್ಕಾರದ ಮೂಲ ಉದ್ದೇಶ. ಅದರಿಂದ ಸಮಗ್ರ ದೃಷ್ಟಿ ಪ್ರಾಪ್ತಿ. ಇದು ಆದರ್ಶ.

ಮನುಷ್ಯನಿಗೆ ಯಾವ ಯಾವ ಸಂಸ್ಕಾರಗಳನ್ನು ಯಾವ ಯಾವ ವಯಸ್ಸಿಗೆ ನೀಡಬೇಕು ಎಂದು ಪ್ರಾಚೀನ ಕಾಲದಿಂದಲೂ ತುಂಬಾ ಯೋಚಿಸಿದ್ದಾರೆ. ಕೆಲವೊಮ್ಮೆ ಈ ಸಂಸ್ಕಾರ ಕೊಡುವ ಕ್ರಮಗಳು 40ಕ್ಕೂ ಮೀರಿವೆ. (ಗೃಹ್ಯಸೂತ್ರ)

ಕೊನೆಗೂ ಇವುಗಳಲ್ಲೇ ಪರಿಷ್ಕಾರವಾಯಿತು. ಸಂಕ್ಷೇಪವಾಯಿತು. ಅತ್ಯವಶ್ಯ ಸಂಸ್ಕಾರಗಳನ್ನು 16ಕ್ಕೆ ಮಿತಿಗೊಳಿಸಿದರು. ಇವುಗಳನ್ನು ಮನುಷ್ಯನ ಮನಸ್ಸಿನ ಮೇಲೆ ಪರಿಣಾಮ ಬೀರುವಂತೆ ರಚಿಸಲಾಯಿತು.

*ಗರ್ಭಾದಾನಂ ಪುಂಸವನಂ ಸೀಮಂತೋ ಜಾತಕರ್ಮ ಚ ।*

*ನಾಮಕ್ರಿಯಾ ನಿಷ್ಕ್ರಮೋಽನ್ನಪ್ರಾಶನಂ ವಪನಕ್ರಿಯಾಃ ।*

*ಕರ್ಣವೇಧೋ ವ್ರತಾದೇಶೋ ವೇದಾರಂಭ ಕ್ರಿಯಾವಿಧಿಃ ॥*

*ಕೇಶಾಂತಃ ಸ್ನಾನಮುದ್ವಾಹೋ ವಿವಾಹಾಗ್ನಿಪರಿಗ್ರಹಃ ।*

*ತ್ರೇತಾಗ್ನಿಸಂಗ್ರಹಶ್ಚೇತಿ ಸಂಸ್ಕಾರಾಃ ಷೋಡಶ ಸ್ಮೃತಾಃ ॥*

(ಗರ್ಭಾದಾನ, ಪುಂಸವನ, ಸೀಮಂತ, ಜಾತಕರ್ಮ, ನಾಮಕರಣ, ನಿಷ್ಕ್ರಮ, ಅನ್ನಪ್ರಾಶನ, ಚೂಡಾಕರ್ಮ, ಕರ್ಣವೇಧ, ಉಪನಯನ, ಜ್ಞಾನಾರಂಭ (ಶಿಕ್ಷಣ), ಕೇಶಾಂತ, ಸಮಾವರ್ತನ, ವಿವಾಹ, ವಿವಾಹಾಗ್ನಿಸ್ವೀಕಾರ ಹಾಗೂ ದಕ್ಷಿಣಾಗ್ನಿ, ಗಾರ್ಹಪತ್ಯ, ಆಹವನೀಯ ಇವು ಮೂರು ಅಗ್ನಿಗಳ ಸಂಗ್ರಹಗಳು)

ಈ ಸಂಸ್ಕಾರಗಳ ಮುಖ್ಯ ಉದ್ದೇಶ ಮನುಷ್ಯನನ್ನು ಮನುಷ್ಯನನ್ನಾಗಿ ಮಾಡುವುದು. ಅವನ ಶ್ರದ್ಧೆ, ಶಿಸ್ತು, ಭಾವನೆ, ಮಾನವೀಯ ಕಳಕಳಿ, ಆತ್ಮವಿಶ್ವಾಸ, ಪ್ರೀತಿ ಮೊದಲಾದ ಮಾನವ ಸಹಜ ಗುಣಗಳನ್ನು ಬೆಳೆಸುವುದು, ಅವನನ್ನು ಅವನೇ ತಿದ್ದಿಕೊಳ್ಳುವುದು ಈ ಸಂಸ್ಕಾರಗಳ ಮುಖ್ಯ ಲಕ್ಷಣ.

ಸಂಸ್ಕಾರಗಳೆಲ್ಲ ಮನಸ್ಸಿನ ಸಂಕಲ್ಪದಿಂದ ನಡೆಯುತ್ತವೆ. ಇವನ್ನು ಅಗ್ನಿಸಾಕ್ಷಿಯಾಗಿ, ಸೂರ್ಯಸಾಕ್ಷಿಯಾಗಿ ಮಾಡುವ ಕ್ರಮವಿತ್ತು. ಇದೆಲ್ಲ ಕೇವಲ ಸತ್‌ಸಂಕಲ್ಪದ ದೃಷ್ಟಿಯಿಂದ.

ಸಂಸ್ಕಾರದ ಕೆಲವು ಮುಖ್ಯ ಗುಣಗಳು - ಪ್ರಾರ್ಥನೆ ಅಂದರೆ ವಿನಯ, ಶರಣಾಗತಿ, ಆಯುಷ್ಯದಲ್ಲಿ ಸತ್ಕರ್ಮ ಮಾಡುವ ಉದಾರ ಮನಸ್ಸನ್ನು ಬೆಳೆಸಿಕೊಳ್ಳುವುದೇ ಉದ್ದೇಶ.

ಮನಸ್ಸನ್ನು ಇತ್ಯಾತ್ಮಕವಾಗಿ ಹದಗೊಳಿಸುವುದೇ ಸಂಸ್ಕಾರಕ್ರಿಯೆಗಳ ಮುಖ್ಯ ಆಶಯ. ಪ್ರತಿಯೊಂದು ಸಂಸ್ಕಾರಕ್ಕೂ ಒಂದು ಉದ್ದೇಶವಿರುತ್ತದೆ.

ಮನುಷ್ಯನು ಉತ್ತಮ ಸಂಸ್ಕಾರಗಳಿಂದ ಪುಟವಿಟ್ಟ ಚಿನ್ನದಂತೆ ಬದುಕಿನಲ್ಲಿ ಹೊಳೆಯುತ್ತಾನೆ. ಅವನ ಶ್ರೇಯಸ್ಸು, ಉನ್ನತಿ ಉಂಟಾಗುತ್ತದೆ.



# ಲಕ್ಷ್ಮಣ ರೇಖೆ

ರಾಮಾಯಣದಲ್ಲಿ ಸೀತೆಯ ರಕ್ಷಣೆಗೆ ಲಕ್ಷ್ಮಣನು ಹಾಕಿರುವ ರೇಖೆಯ ಕತೆ ನೆನಪಿದೆ ತಾನೆ? ಆ ರೇಖೆ ದಾಟಿದುದರಿಂದ ಸೀತೆಗೆ ಯಾವ ಯಾವ ಕಷ್ಟಗಳು ಬಂದುವು? ಎಲ್ಲರಿಗೂ ಗೊತ್ತು.

ಎಲ್ಲರಿಗೂ ಗೊತ್ತಿರುವ ಈ ಕತೆಯಲ್ಲಿ ಲಕ್ಷ್ಮಣರೇಖೆಯ ನೀತಿಯನ್ನು ಎಷ್ಟು ಮಂದಿ ತಮ್ಮ ಜೀವನದಲ್ಲಿ ಅಳವಡಿಸಿಕೊಳ್ಳುತ್ತಾರೆ?

ಪ್ರತಿಯೊಬ್ಬರ ಬದುಕಿನಲ್ಲೂ ಕೆಲಸದಲ್ಲೂ ಲಕ್ಷ್ಮಣರೇಖೆ ಇರುತ್ತದೆ. ಅದನ್ನು ತಿಳಿದಿರುವ ಕೆಲವೇ ಕೆಲವರು ಮಾತ್ರ ಯಶಸ್ವಿಯಾಗುತ್ತಾರೆ. ಅವರಿಗೆ ತಮ್ಮ ಸುತ್ತಲಿರುವ ಲಕ್ಷ್ಮಣರೇಖೆಯ ಅರಿವು ಯಾವಾಗಲೂ ಇರುತ್ತದೆ.

ನಮ್ಮ ನಮ್ಮ ಲಕ್ಷ್ಮಣ ರೇಖೆಗಳನ್ನು ಅರಿಯುವುದು ಎಂದರೆ ನಮ್ಮ ನಮ್ಮ ಇತಿಮಿತಿ ಮತ್ತು ಸಾಧ್ಯತೆಗಳನ್ನು ಸರಿಯಾಗಿ ಮನದಟ್ಟು ಮಾಡಿಕೊಳ್ಳುವುದು.

ಇನ್ನೊಬ್ಬರ ವಿಷಯದಲ್ಲಿ ತಲೆಹರಟೆ ಮಾಡದೆ, ಮೂಗು ತೂರಿಸದೆ ಇರುವುದು ಸಭ್ಯರ ಲಕ್ಷಣ. ನಾಗರಿಕತೆಯ ಗುಣ.

ಒಂದು ಗಾದೆ ಮಾತಿದೆ. ತಮ್ಮ ಕಾಲು ಬುಡದಲ್ಲಿ ಕೊಳೆಯುತ್ತ ಬಿದ್ದಿರುವ ಕುಂಬಳ ಕಾಯಿಗಳ ಕಡೆಗೆ ಗಮನ ಕೊಡದೆ ಇತರರಲ್ಲಿದ್ದ ಸಾಸಿವೆಗಳ ಕಡೆಗೆ ಹೆಚ್ಚು ಕುತೂಹಲ ತಳೆಯುವುದು ಒಂದು ದುರಭ್ಯಾಸ.

ಇತರರ ಖಾಸಗಿ ವಿಷಯಗಳ ಬಗ್ಗೆ ಅನವಶ್ಯಕ ಕುತೂಹಲ ತಳೆದು

ಕಲೆಹಾಕುವುದೂ ಒಂದು ಬಗೆಯ ಕಳ್ಳತನ. ಅಧಿಕಪ್ರಸಂಗ. ಅದೊಂದು ಮಾನಸಿಕ ರೋಗ. ಅಲ್ಲಿ ಆತ್ಮಗ್ಲಾನಿ ಉಂಟಾಗುತ್ತದೆ. ಮನಸ್ಸು ಮುದುಡುತ್ತದೆ.

ಇನ್ನೊಬ್ಬರ ಸಿರಿವಂತಿಕೆ, ಯಶಸ್ಸು ಕಂಡು ಕರುಬುವುದೂ ಲಕ್ಷ್ಮಣರೇಖೆ ದಾಟುವ ಒಂದು ಬಗೆಯೆ. ಮತ್ಸರ ಪಡುವ ಸಮಯ ಮತ್ತು ಸತ್ತ್ವವನ್ನು ಸ್ವಂತ ಪ್ರಗತಿ, ಅಭಿವೃದ್ಧಿಗಾಗಿ, ರಚನಾತ್ಮಕವಾಗಿ ಉಪಯೋಗಿಸುವುದು ಆರೋಗ್ಯಕರ. ಅದರಿಂದ ಸ್ವಂತ ಬೆಳವಣಿಗೆ ಯಾಗುತ್ತದೆ.

ಮುಂದಿನಿಂದ ಹಲ್ಲುಕಿರಿದು ಒಳ್ಳೆಯ ಮಾತನಾಡಿ ಹಿಂದಿನಿಂದ ಚಾರಿತ್ರ್ಯವಧೆ ಮಾಡುವುದೂ ಲಕ್ಷ್ಮಣ ರೇಖೆ ದಾಟುವ ಒಂದು ರೀತಿ. ಅದೊಂದು ಡಾಂಭಿಕ ಕ್ರಿಯೆ. ಅದರಿಂದ ಮನಸ್ಸು ಹುಳ್ಳಗಾಗುತ್ತದೆ, ೆರಳುತ್ತದೆ. ವಿಕೃತ ವಿಚಾರಗಳೇ ಹುಟ್ಟಿ, ಬೆಳೆದು ಅಗಾಧವಾಗುತ್ತವೆ.

ಸ್ವಾತಂತ್ರ್ಯವೆಂದರೆ ಇನ್ನೊಬ್ಬರ ಕ್ಷೇತ್ರ ಪ್ರವೇಶವಲ್ಲ. ಇನ್ನೊಬ್ಬರ ಸ್ನೇಹದ ದುರ್ಲಾಭ ಪಡೆಯುವುದು - ಇದೂ ಲಕ್ಷ್ಮಣ ರೇಖೆಯ ಗಡಿ ದಾಟಿದ ತಪ್ಪು ಕೆಲಸವೆ.

ಇನ್ನೊಬ್ಬರ ಸ್ವಾತಂತ್ರ್ಯ ಅಪಹರಣ ದೊಡ್ಡ ಪಾಪ. ರೈಲು ಬಸ್ಸುಗಳಲ್ಲಿ ಕೂತು ಕೊಳ್ಳುವಾಗ, ಕ್ಯೂನಲ್ಲಿ ನಿಂತಾಗ, ಇನ್ನೊಬ್ಬರ ಸ್ಥಳವನ್ನು ಅತಿಕ್ರಮಿಸುವುದೂ ಅಪರಾಧ. ಇದು ನಮ್ಮ ಪ್ರಜ್ಞೆ ಜಾಗ್ರತವಾಗಿದ್ದರೆ ಮಾತ್ರ ಪದೇ ಪದೇ ಎಚ್ಚರಿಕೆ ಕೊಡುತ್ತಿರುತ್ತದೆ.



# ತಪಸ್ಸು - 1

ಬದುಕಿನಲ್ಲಿ ಉತ್ಕಟ ಸಾಧನೆ ಮಾಡುವ ವಿಧಾನ. ದೇಹ ಮತ್ತು ಮನಸ್ಸನ್ನು ಅಗ್ನಿ ಪರೀಕ್ಷೆಗೆ ಒಡ್ಡಿ ಅಸಾಧ್ಯ ಎಂಬುದನ್ನು ಸಾಧ್ಯ ಮಾಡಿ ತೋರಿಸುವ ಉಪಾಯ.

ತಾಪದಿಂದಲೇ ತಪ ಬಂದಿದೆ. ಹಸಿವು, ಬಾಯಾರಿಕೆ, ಶೀತ, ಉಷ್ಣ ಸಹನೆಯೂ ತಪಸ್ಸಿನ ಪ್ರಯೋಗಗಳೆನಿಸಿವೆ.

ಯಜ್ಞ, ದಾನ, ತಪಸ್ಸು ಇವು ಭಾರತೀಯ ಸಂಸ್ಕೃತಿಯ ಮೂರು ಪ್ರಮುಖ ಅಂಗಗಳು. ತಪಸ್ಸಿನಿಂದಲೇ ಮನುಷ್ಯನ ಶುದ್ಧೀಕರಣವಾಗುತ್ತದೆ. ಮಾನವನ ಕಾಮನೆಗಳ ಪೂರ್ತಿಗಾಗಿ ಇರುವ ಸಾಧನೆಯನ್ನೇ ತಪಸ್ಸು ಎನ್ನುವುದು. ಅವನಿಗೆ ಸಿದ್ಧಿ ಬರಬೇಕಾದರೂ ತಪಸ್ಸು ಮಾಡಬೇಕು. ಅಂತ್ಯದಲ್ಲಿ ಕಾಮನೆಗಳೆಲ್ಲ ನಾಶವಾಗಬೇಕು. ಅದೇ ತಪಃಸಿದ್ಧಿ.

ತಪಸ್ಸು ಹೆಚ್ಚಿದಷ್ಟು ಜೀವನ ಉತ್ಕರ್ಷವಾಗುತ್ತದೆ. ಜೀವನ ಪರಾಕಾಷ್ಠೆ ಮುಟ್ಟುತ್ತದೆ.

ನಮ್ಮ ವೇದ, ಉಪನಿಷತ್ತುಗಳೆಲ್ಲ ತಪಸ್ಸಿನ ಅಖಂಡ ಸಾಧ್ಯತೆಗಳನ್ನು ಹಾಡಿ ಹೊಗಳಿವೆ. ತಪಸ್ಸು ಮಾನವನನ್ನು ಪಾಪರಹಿತನನ್ನಾಗಿ ಮಾಡುತ್ತದೆ.

ತಪಸ್ಸು ಅತ್ಯಂತ ಪ್ರತಿಷ್ಠಿತ ವಿಧಾನ. ಅದೇ ಜ್ಞಾನಪ್ರಾಪ್ತಿಯ ರಾಜಮಾರ್ಗ.

ಮಹಾನಾರಾಯಣೀಯೋಪನಿಷತ್ತಿನಲ್ಲಿ ತಪಸ್ಸಿನ ವ್ಯಾಪಕ ರೂಪವನ್ನು ವಿವರಿಸಿದ್ದಾರೆ-

ಋತಂ ತಪಃ ಸತ್ಯಂ ತಪಃ ಶ್ರುತಂ ತಪಃ ಶಾಂತಂ ತಪೋ ದಮಸ್ತಪಃ ।
ಶಮಸ್ತಪೋ ದಾನಂ ತಪೋ ಯಜ್ಞಸ್ತಪೋ ಭೂರ್ಭುವಸ್ಸುವ
ರ್ಬ್ರಹ್ಮೈತದುಪಾಸ್ಯೈತತ್ತಪಃ ॥

(ಋತವು ತಪ, ಸತ್ಯವು ತಪ-ಶ್ರುತವು ತಪ, ಶಾಂತವು ತಪ, ದಮವು ಪ, ಶಮವು ತಪ, ದಾನವು ತಪ, ಯಜ್ಞವು ತಪ, ಸಚ್ಚಿದಾನಂದ ಬ್ರಹ್ಮನ ುಪಾಸನೆಯೇ ತಪಸ್ಸು)

ತಪಸ್ಸಿನ ಏಕಮೇವ ಉದ್ದೇಶ ಜ್ಞಾನ ಸಾಧನೆ. ಜ್ಞಾನಸಿದ್ಧಿ. ತಪಸ್ಸಿನಿಂದ ಾನವನ ಮನಸ್ಸಿನ ಮಲವೆಲ್ಲ ತೊಳೆದು ಶುದ್ಧೀಕರಣವಾಗುತ್ತದೆ. ಪಸ್ಸಿನಿಂದ ತಮಸ್ಸು ಪಾಪತಾಪಗಳೂ ತೊಲಗಿ ಹೋಗುತ್ತವೆ.

ಇಡೀ ಬದುಕನ್ನು ನಾಲ್ಕು ವಿಭಾಗಗಳನ್ನಾಗಿ ಮಾಡಿ ಬ್ರಹ್ಮಚರ್ಯ, ಹಸ್ಥ, ವಾನಪ್ರಸ್ಥ, ಸನ್ಯಾಸ - ಈ ರೀತಿ ಭಾರತೀಯ ದಾರ್ಶನಿಕರು ಂಗಡಿಸಿದ್ದಾರೆ. ಈ ನಾಲ್ಕು ವಿಭಾಗಗಳಲ್ಲೂ ಅದರದ್ದೇ ಆದ ತಪಸ್ಸು ವೆ.

ಅದೇ ರೀತಿ ಧರ್ಮ - ಅರ್ಥ - ಕಾಮ - ಮೋಕ್ಷ ಇವು ನಾಲ್ಕು ುರುಷಾರ್ಥಗಳು. ಜೀವನದ ನಾಲ್ಕು ಮೌಲ್ಯಗಳು. ಇವುಗಳಿಗೂ ತಿಯೊಂದಕ್ಕೂ ಅದರದ್ದೇ ಆದ ತಪಸ್ಸು ಇದೆ.

ಅಹಂಕಾರವನ್ನು ಎಲ್ಲ ರೀತಿಗಳಿಂದಲೂ ದೂರ ಮಾಡುವುದು ತಪಸ್ಸಿನ ಂದು ಉದ್ದೇಶ.

ವಾನಪ್ರಸ್ಥಾಶ್ರಮದಲ್ಲಿ ತಪಸ್ಸು ಮಾಡುವ ಬಗ್ಗೆ ಮುಂಡಕ ುಪನಿಷತ್ತಿನಲ್ಲಿ ಒಂದು ಸುಂದರ ರೂಪಕ ಇದೆ.

ಶಾಂತ ಮತ್ತು ವಿದ್ವಾನ್ ಪುರುಷ ವನದಲ್ಲಿ ಉಳಿಯುತ್ತಾನೆ. ಅವನು ಕ್ಷಾವೃತ್ತಿ ಯಲ್ಲಿ ತನ್ನ ಜೀವನ ನಿರ್ವಹಣೆ ಮಾಡುತ್ತಾನೆ. ಪಾಪರಹಿತನಾಗಿ, ದ್ಧೆಯಿಂದ ತಪಸ್ಸು ಮಾಡುತ್ತ ಸೂರ್ಯದ್ವಾರದಿಂದ ಮೃತ್ಯುವನ್ನು ಲ್ಲುತ್ತಾನೆ. ಅಮೃತತ್ವ ಪಡೆಯುತ್ತಾನೆ.





# ತಪಸ್ಸು - 2

ಸಾಗರಕ್ಕೆ ಸಾಗರವೇ ಉಪಮೆಯಂತೆ. ಅದೇ ರೀತಿ ತಪಸ್ಸಿಗೆ ಬೇರೆ ಉಪಮೆ ಕೊಡುವುದು ಕಷ್ಟ. ಎಷ್ಟು ಹೇಳಿದರೂ ಅದು ಸುತ್ತು ಬಳಸಿದ ಕತೆಯಾಗುತ್ತದೆ.

ತಪಸ್ಸನ್ನು ಅಗ್ನಿಗೆ ಹೋಲಿಸಿದ್ದಾರೆ - (ಅಗ್ನಿ ದಿವ್ಯ). ತಪಸ್ಸು ಎಂದರೆ ದೀಕ್ಷೆ ಎಂದಿದ್ದಾರೆ. ತಪಸ್ಸು ಎಂದರೆ ಲೋಕವನ್ನು ಜಯಿಸುವುದು ಎಂದೂ ಹೇಳಿದ್ದಾರೆ. ತಪಸ್ವಿಗೆ ತುಂಬ ಕೀರ್ತಿ ಹಾಗೂ ಯಶ ಸಿಗುತ್ತದೆ. ಆದರೆ ಅದು ತಪಸ್ಸಿನ ಉದ್ದೇಶ ಆಗಿರಬೇಕಾಗಿಲ್ಲ.

ಮನು ಮಹರ್ಷಿ ಹೇಳುತ್ತಾನೆ - ''ತಪಸ್ಸು ಬಹಳ ದುಸ್ತರವಾದುದು. ಅದು ಪ್ರಾಪ್ತಿಯಾಗಲು ತುಂಬ ಕಷ್ಟವಿದೆ (ದುಷ್ಪ್ರಾಪ್ಯ). ಅದು ದುರ್ಗಮ. ಮುಂದೆ ಮುಂದೆ ಹೆಜ್ಜೆ ಇಡುವಾಗ ಒಂದೊಂದು ಹೆಜ್ಜೆಯಲ್ಲೂ ತೊಂದರೆಗಳು ಬರುತ್ತವೆ. ಆದರೆ ಇವುಗಳನ್ನೆಲ್ಲ ಜಯಿಸಲು ತಪಸ್ಸು ಅತಿ ಅಗತ್ಯ. ತಪಸ್ಸನ್ನು ಅತಿಕ್ರಮಿಸುವುದು ಮಾತ್ರ ಸಾಧ್ಯವಿಲ್ಲ''.

ತಪಸ್ಸು ಎಂಬ ಒಂದು ಉತ್ತುಂಗ ಸಾಧನೆ ಜಗತ್ತಿಗೆ ಭಾರತ ಕೊಟ್ಟ ಕಾಣಿಕೆ. ಭಗವದ್ಗೀತೆಯಲ್ಲೂ ತಪಸ್ಸಿನ ಬಗ್ಗೆ ವಿಸ್ತಾರವಾದ ಹೇಳಿಕೆಗಳನ್ನು ಭಗವಂತನು ಕೊಟ್ಟಿದ್ದಾನೆ.

ತಪಸ್ಸು ಎಂದರೆ ದೇವ, ದ್ವಿಜ, ಗುರು ಮತ್ತು ವಿದ್ವಾಂಸರ ಪೂಜೆ. ಇದು ಶರೀರದ ತಪಸ್ಸು.

ಅಂತರಂಗ - ಬಹಿರಂಗ ಶುದ್ಧಿ, ಋಜುತ್ವ, ಬ್ರಹ್ಮಚರ್ಯ, ಅಹಿಂಸೆ, ನಿರುದ್ವೇಗ, ಸತ್ಯವೂ ಪ್ರಿಯವೂ ಆದ ಮಾತು, ಸ್ವಾಧ್ಯಾಯ - ಇವು ವಾಚಿಕ ತಪಗಳು. ಪ್ರಸನ್ನತೆ, ಮೌನ, ಆತ್ಮನಿಗ್ರಹ, ಭಾವಸಂಶುದ್ಧಿ - ಇವು ಮಾನಸಿಕ ತಪಸ್ಸು.

ತಪಸ್ಸಿನಿಂದ ಮನುಷ್ಯನ ಯೋಚನಾ ಲಹರಿ, ಚಿತ್‌ಶಕ್ತಿ, ಚಿಂತನ ಕ್ತಿಗಳು ಪುಷ್ಟಿಗೊಳ್ಳುತ್ತವೆ.

ನಮ್ಮಲ್ಲಿ ದೇವ ದೇವತೆಗಳೂ ತಪಸ್ಸಿಗೆ ಕೂತುಕೊಳ್ಳುವ ಚಿತ್ರಣಗಳಿವೆ. ್ರಹ್ಮ, ವಿಷ್ಣು, ಮಹೇಶ್ವರರೂ ತಪಸ್ಸು ಮಾಡಿದವರೆ. ನರನಾರಾಯಣ, ುದ್ಧ, ಅರ್ಜುನ, ಭಗೀರಥ ಇವರೆಲ್ಲ ತಪಸ್ಸನ್ನು ಮಾಡಿಯೇ ಸಿದ್ಧಿ ಡೆದವರು. ನಮ್ಮ ಪುರಾಣಗಳಲ್ಲಿ ದೇವ ದಾನವರೂ ತಪಸ್ಸನ್ನು ಾಡುವ ಚಿತ್ರಣಗಳೇ ತುಂಬಿವೆ. ವಿಶ್ವಾಮಿತ್ರನೂ ತಪಸ್ಸನ್ನಾಚರಿಸಿಯೇ ್ರಹ್ಮರ್ಷಿ ಪದವಿ ಪಡೆದನು.

ವಿಶ್ವ ಸೃಷ್ಟಿಗೂ ತಪಸ್ಸು ಮಾಡಬೇಕಾಯಿತು ಎಂಬ ಒಂದು ಕತೆ ುರುತ್ತದೆ. ವಿಶ್ವವನ್ನು ಸೃಷ್ಟಿಸಬೇಕು ಎಂದು ಈಶ್ವರನು ಬ್ರಹ್ಮನನ್ನು ್ರಷ್ಟಿಸುತ್ತಾನೆ. ಹಾಗೆ ಆದೇಶವನ್ನು ಈಶ್ವರನು ಕೊಡುತ್ತಾನೆ. ಆದರೆ ಪಾಪ, ್ರಹ್ಮದೇವನಿಗೆ ಸೃಷ್ಟಿ ಮಾಡುವುದು ಹೇಗೆ ಎಂದೇ ಗೊತ್ತಿರಲಿಲ್ಲ. ಅವನು ಶ್ವರನಿಗೇ ಶರಣು ಹೋಗುತ್ತಾನೆ. ''ತಪಸ್ಸು ಆಚರಿಸು'' ಎಂದು ಶ್ವರನ ಆಜ್ಞೆ ಆಗುತ್ತದೆ. ಅವನು ನೂರು ವರ್ಷ ತಪಸ್ಸನ್ನು ಾಡಿದನಂತೆ. ಅದರಿಂದ ಅವನಿಗೆ ಸೃಷ್ಟಿಯ ರಹಸ್ಯ ೃಗ್ಗೋಚರವಾಯಿತು.

ರಾಕ್ಷಸೀ ಶಕ್ತಿಯವರು ಕೂಡ ತಪಸ್ಸನ್ನು ಆಚರಿಸಿದರು ಎಂದು ೇಳುತ್ತಾರೆ. ಏನಿದರ ಅರ್ಥ?

ಕೆಟ್ಟ ಕೆಲಸ ಮಾಡಲಿಕ್ಕೆ ಒಳ್ಳೆಯ ದಾರಿಯೆ? ಕಾರ್ಯ ಕಾರಣಗಳ ಈ ್ರಶ್ನೆ ಜಿಜ್ಞಾಸುಗಳಿಗೆ ಆಹಾರ. ಒಳ್ಳೆಯ ಕೆಲಸ ಮಾಡಲಿಕ್ಕೆ ಕೆಟ್ಟ ದಾರಿ ಡಿಯಬಹುದೆ?

ಒಳ್ಳೆಯ ಉದ್ದೇಶಕ್ಕಾಗಿ ಒಳ್ಳೆಯ ರೀತಿಯಲ್ಲಿ ಮಾಡಿದ್ದೇ ತಪಸ್ಸು. ಆ ುಜು ಮಾರ್ಗವೇ ತಪಸ್ಸು. ಇಲ್ಲವಾದರೆ ತಮಸ್ಸು.



# ತಪಸ್ಸು - 3

ತಪಸ್ಸನ್ನು ಏಕೆ ಮಾಡುತ್ತಾರೆ?

ತೀರಾ ಲೌಕಿಕ ವಿಷಯಗಳಿಗೂ ತಪಸ್ಸನ್ನು ಆಚರಿಸುವವರು ಇದ್ದಾರೆ. ಸಂತಾನ ಪ್ರಾಪ್ತಿ, ಸಂಪತ್ತು, ಸುಖೋಪಭೋಗದ ಇಚ್ಛೆಗಳಿಗಾಗಿ ತಪವನ್ನಾಚರಿಸುತ್ತಾರೆ.

ದೇವರ ಅನುಗ್ರಹಕ್ಕೆ, ಆತ್ಮ ಸಾಕ್ಷಾತ್ಕಾರಕ್ಕೆ ತಪಸ್ಸನ್ನು ಆಚರಿಸುವವರೂ ವಿರಳವಾಗಿ ಸಿಗುತ್ತಾರೆ.

ಅವರವರ ಪೂರ್ವಸಂಸ್ಕಾರ, ಮಟ್ಟ, ಕಲ್ಪನೆ, ಆದರ್ಶಗಳನ್ನು ಹೊಂದಿ ತಪಸ್ಸನ್ನು ಮಾಡುತ್ತಾರೆ. ತಪಸ್ಸಿಗೆ ಸರಿಯಾಗಿ ಪ್ರಾಪ್ತಿ. ಕೆಲವರು ಮುಕ್ತಿಗಾಗಿ ತಪಸ್ಸು ಮಾಡುತ್ತಾರೆ. ಅಪರೂಪದಲ್ಲಿ ಕೆಲವರು ತಪಸ್ಸು ಮಾಡಿ ಜೀವನ್ಮುಕ್ತರಾಗುತ್ತಾರೆ.

ಕೆಲವರು ದೇಹದಂಡನೆ ಮಾಡಿಕೊಂಡು ತಪಸ್ಸನ್ನು ಆಚರಿಸುತ್ತಾರೆ. ಒಂದು ಕಾಲಲ್ಲಿ ನಿಂತು, ಶೀರ್ಷಾಸನ ಹಾಕಿ, ನಿದ್ರೆಯನ್ನೇ ಮಾಡದೆ, ನಿರಾಹಾರ, ನಿರ್ಜಲ ವಾಗಿ ನಿರಂತರ ತಪಸ್ಸನ್ನು ಮಾಡುವ ಕತೆಗಳನ್ನೂ ನಾವು ಕೇಳಿದ್ದೇವೆ.

ಬೇಡನಾಗಿದ್ದ ವಾಲ್ಮೀಕಿ ಮಹರ್ಷಿಯಾದದ್ದೇ ತಪಸ್ಸಿನಿಂದ. ಅವನು ತಪಸ್ಸಿಗೆ ಕೂತಾಗ ಅವನ ಸುತ್ತ ಹುತ್ತ ಕಟ್ಟಿಕೊಂಡಿತು. ವಲ್ಮೀಕವೆಂದರೆ ಹುತ್ತ. ಅವನ ತಪಸ್ಸು ಎಷ್ಟು ಘೋರವಾಗಿರಬಹುದು?

ಇಂದಿಗೂ ಇಂಥ ತಪಸ್ವಿಗಳು ಭಾರತದಲ್ಲಿ ಇದ್ದಾರೆ. ಹೆಚ್ಚಿನವರು ಅಜ್ಞಾತರಾಗಿದ್ದಾರೆ. ಎಲ್ಲೋ ಕೆಲವರು ರಮಣ ಮಹರ್ಷಿ, ನಿತ್ಯಾನಂದ ಅವರಂಥವರು ಕಾಣಸಿಗುತ್ತಾರೆ.

ಬೌದ್ಧ ಧರ್ಮವೂ ತಪಸ್ಸಿಗೆ ಮಹತ್ತ್ವ ಕೊಟ್ಟಿದೆ. ಪೂರ್ವಕರ್ಮಗಳನ್ನು ಸದಿಂದಲೇ ನಾಶಪಡಿಸಬೇಕು ಎಂದು ಬುದ್ಧನು ನಂಬಿದ್ದನು. ಆದರೆ ೇಹದಂಡನೆ ಮತ್ತು ಆತ್ಮಕ್ಲೇಶ ಮಾಡಿಕೊಂಡು ತಪಸ್ಸನ್ನು ತರಿಸಬಾರದು ಎಂದು ಬುದ್ಧನು ಹೇಳುತ್ತಿದ್ದನು. ಸ್ವತಃ ಬುದ್ಧನಿಗೇ ಕಷ್ಟ ಂದು ಸ್ವಾನುಭವದಿಂದ ಈ ಮಾತನ್ನು ಅವನು ಹೇಳಿದ್ದನು.

ಜ್ಞಾನಪ್ರಾಪ್ತಿಗಾಗಿ ಅವನು ಕಠಿಣ ತಪಸ್ಸು ಮಾಡಿ ಅಸ್ಥಿಪಂಜರದಂತಾದ. ದರೆ ಇದು ಸರಿಯಾದ ದಾರಿಯಲ್ಲ ಎಂದು ಅವನು ಕಂಡುಕೊಂಡ.

ಶರೀರವನ್ನು ಸುಸ್ಥಿತಿಯಲ್ಲಿಟ್ಟು ಜ್ಞಾನಮಾರ್ಗದಲ್ಲಿ ಅವನ ನ್ವೇಷಣೆಯ ತಪಸ್ಸು ಮುಂದುವರಿಯಿತು. ಏಕಾಂತ, ಚಿಂತನ, ಮೌನ, ್ಯಾನಗಳ ಮೂಲಕ ಅವನ ತಪಸ್ಸು ಸಿದ್ಧಿಯಾಗಿ ಅವನು ಬುದ್ಧನಾದ.

ನೈತಿಕ ಆಚರಣೆ, ಧ್ಯಾನ, ಅಂತರ್ಮುಖೀ, ಶ್ರದ್ಧೆ - ಈ ಧ್ಯೇಯಗಳಿಂದ ುದ್ಧ ತನ್ನ ಜೀವನದಲ್ಲಿ ಪ್ರಕಾಶವನ್ನು ಕಂಡುಕೊಂಡ.

ಆದರೆ ಜೈನಧರ್ಮವು ಕಾಯಕ್ಲೇಶಕ್ಕೆ ಮಹತ್ತ್ವ ಕೊಟ್ಟಿದೆ.

ಜೈನರಲ್ಲಿ ಎರಡು ಮುಖ್ಯ ತಪೋಭೇದಗಳಿವೆ. ಅವು ವಮೋದರ್ಯ, ಉಪವಾಸ, ರಸಪರಿತ್ಯಾಗ, ವೃತ್ತಿಪರಿ, ಸಂಖ್ಯಾನ, ವಿಕ್ತಶಯ್ಯಾಸನ - ಇವು ಬಾಹ್ಯ ತಪದ ಆರು ರೂಪಗಳು.

ಸ್ವಾಧ್ಯಾಯ, ಶೋಧನ (ಪ್ರಾಯಶ್ಚಿತ್ತ), ವೈವಾವೃತ್ಯ, ವ್ಯುತ್ಸರ್ಗ, ನಯ, ಧ್ಯಾನ - ಇವು ಅಭ್ಯಂತರ ತಪದ ಆರು ರೂಪಗಳು.

ಒಟ್ಟಿನಲ್ಲಿ ತಪಸ್ಸಿನಿಂದ ಮಾನವನು ಭೂಲೋಕದಲ್ಲೇ ತಪೋಲೋಕ ಷ್ಟಿ ಮಾಡಿಕೊಳ್ಳುತ್ತಾನೆ.

ಕತ್ತಲೆಯಿಂದ ಬೆಳಕಿಗೆ ಬರುತ್ತಾನೆ.





# ಸ್ವಾಧ್ಯಾಯ

**ಮ**ನೋರಂಜನೆಗಾಗಿ, ಹವ್ಯಾಸಕ್ಕಾಗಿ ಓದುವುದು ಒಂದು. ಅಧ್ಯಯನ ಮಾಡುವ ದೃಷ್ಟಿಯಿಂದ ಓದುವುದು, ಅದನ್ನು ತಿಳಿದುಕೊಳ್ಳುವುದು ಇನ್ನೊಂದು.

ಓದಿದ್ದನ್ನು ಚೆನ್ನಾಗಿ ತಿಳಿದು, ಅರಗಿಸಿಕೊಳ್ಳುವುದೇ ಸ್ವಾಧ್ಯಾಯ. ಅದೊಂದು ಶಿಸ್ತು. ಅದೊಂದು ಕ್ರಮ. ಅದೊಂದು ನಿಯಮ.

ಸ್ವಾಧ್ಯಾಯದ ಕ್ರಮದಲ್ಲಿ ಮೂರು ಬಗೆಗಳಿವೆ -

1. ಓದಿದ್ದನ್ನೇ ಮತ್ತೆ ಮತ್ತೆ ಓದಿ ಅದನ್ನು ತಿಳಿಯುವುದು.

2. ಓದಿದ್ದನ್ನು ನಾವೇ ಚಿಂತನ ಮಾಡುವುದು. ಅದರ ಬೇರೆ ಬೇರೆ ಮಗ್ಗುಲುಗಳ ಬಗ್ಗೆ ಯೋಚಿಸುವುದು.

3. ಅದರ ಅರ್ಥದೊಂದಿಗೆ ಮನಸ್ಸಿನ ಅನುಸಂಧಾನ. ಎಲ್ಲ ಕಾಲಕ್ಕೂ ಅದನ್ನು ಮನದಟ್ಟು ಮಾಡಿಕೊಳ್ಳುವುದು. ಓದಿದ್ದನ್ನೇ ಧ್ಯಾನ ಮಾಡುವುದು.

ಸಾಮಾನ್ಯ ಓದಿನಲ್ಲಿ, ಓದು ಮುಗಿದೊಡನೆ ಅದನ್ನು ಮರೆತು ಬಿಡುತ್ತಾರೆ. ಅಥವಾ ಅದರ ಉಪೇಕ್ಷೆ ಮಾಡುತ್ತಾರೆ. ಒಮ್ಮೆ ಓದಿಯಾದ ಬಳಿಕ ಅದರ ಗೊಡವೆಗೇ ಹೋಗುವುದಿಲ್ಲ.

ಸ್ವಾಧ್ಯಾಯದಲ್ಲಿ ಓದಿದುದನ್ನು ಹೃದ್ಗತ ಮಾಡಿಕೊಳ್ಳುತ್ತಾರೆ. ಅದು ಬರೀ ಬಾಯಿ ಪಾಠವಲ್ಲ. ಅದು ಸ್ಪಷ್ಟ ತಿಳಿವಳಿಕೆ. ಒಮ್ಮೆ ಹೃದ್ಗತವಾದುದು ನಮ್ಮ ಮನಸ್ಸಿನ ಭಾಗವಾಗಿ ಬಿಡುತ್ತದೆ.

ಶಿಕ್ಷಣದಲ್ಲಿ ಸ್ವಾಧ್ಯಾಯಕ್ಕೆ ಅತ್ಯಂತ ಹೆಚ್ಚಿನ ಮಹತ್ತ್ವವಿದೆ. ಒಮ್ಮೆ ಓದಿದುದನ್ನು ಮತ್ತೆ ಶಾಂತವಾಗಿ, ಮೌನವಾಗಿ ಕೂತು ತನ್ನೊಳಗೇ ಮನನ ಮಾಡುವುದು ಒಂದು ಉತ್ತಮ ಅಭ್ಯಾಸ.

ಹಿಂದೆ ಪ್ರತಿ ಶಾಲೆಯಲ್ಲಿ ‘ಮೌನ’ ಎಂಬ ಒಂದು ತರಗತಿ ಇರುತ್ತಿತ್ತು. ಮೌನ ಸ್ವಾಧ್ಯಾಯದ ಒಂದು ಭಾಗವೇ ಸರಿ. ಓದಿದುದನ್ನು ಮನಸ್ಸು ಂತಿಸಿ, ಮತ್ತೆ ಮತ್ತೆ ನೆನಪು ಮಾಡಿಕೊಳ್ಳುವ ಈ ಕ್ರಿಯೆ ಯಾಂತ್ರಿಕವಾಗಬಾರದು.

ಸ್ವಾಧ್ಯಾಯ ಒಂದು ಸೃಜನಶೀಲ ಕಲೆ. ಒಂದು ವಿಷಯವನ್ನು ಓದಿದಾಗ ದರ ಬಗ್ಗೆ ನಾವು ಹಲವು ರೀತಿಗಳಲ್ಲಿ ಪ್ರತಿಕ್ರಿಯೆ ವ್ಯಕ್ತಪಡಿಸುತ್ತೇವೆ. ದು ಅವರವರ ಅನುಭವ, ವಿಚಾರಶಕ್ತಿ, ಸ್ವಯಂಪ್ರೇರಣೆ, ಮಯಸ್ಫೂರ್ತಿ, ಓದಿದ ಹಿನ್ನೆಲೆ ಇವೆಲ್ಲವನ್ನೂ ಒಳಗೊಂಡಿರುತ್ತದೆ.

ಸತತ ಅಭ್ಯಾಸದಿಂದಲೇ ಸ್ವಾಧ್ಯಾಯವನ್ನು ರೂಢಿಸಿಕೊಳ್ಳಬಹುದು. ದು ಏಕಾಗ್ರಚಿತ್ತಕ್ಕೂ ಸಹಕಾರಿ. ಒಂದು ವಿಷಯದ ಕುರಿತು ಸಮಗ್ರವಾಗಿ ೋಚಿಸುವುದಕ್ಕೆ ಪೂರಕ.

ಸ್ವಾಧ್ಯಾಯದಿಂದ ಮನಸ್ಸು ಮತ್ತು ಯೋಚನೆಗಳು ಮಿಂಚುತ್ತವೆ. ಧ್ಯಯನ ಜೀವಂತವಾಗಿರುತ್ತದೆ. ವಿಚಾರ ಲಹರಿಗಳು ಸಾಲುಕಟ್ಟಿ ರುತ್ತವೆ. ಆಗ ಆಗುವ ಆನಂದಕ್ಕೆ ಎಣೆಯಿಲ್ಲ.

ಪ್ರತಿಭೆಯ ಹಿಂದೆ ಸ್ವಾಧ್ಯಾಯವಿರುತ್ತದೆ. ಬರೀ ಪ್ರತಿಭೆಯಿಂದ ಏನೂ ಗುವುದಿಲ್ಲ. ಅದರ ಹಿಂದೆ ನಡೆಯುವ ಮಾನಸಿಕ ಸಿದ್ಧತೆಯೇ ಧ್ಯಾಯ. ಸ್ವಾಧ್ಯಾಯ ಎಂಬುದು ಪುರುಷಪ್ರಯತ್ನ.

ಜ್ಞಾನ ಸಂಪಾದನೆ ಒಂದು ಸತತ ಕ್ರಿಯೆ. ಅದನ್ನು ಮನಸ್ಸಿನ ಗ್ರಾಣದಲ್ಲಿ ಶೇಖರಿಸಿಟ್ಟು ಅವಶ್ಯವಾದಾಗ ಉಪಯೋಗ ಾಡಿಕೊಳ್ಳುತ್ತೇವೆ. ಶುಷ್ಕ ಜ್ಞಾನದಿಂದ ಯಾವ ಉಪಯೋಗವೂ ಇಲ್ಲ. ಆ ನದಿಂದ ಲೋಕ ಕಲ್ಯಾಣವಾಗಬೇಕು ಎಂಬುದೇ ಸಾರ್ಥಕ ಭಾವ.

ಅದರಿಂದಲೇ ಸ್ವಾಧ್ಯಾಯವನ್ನು ಬ್ರಹ್ಮಯಜ್ಞ ಎಂದಿದ್ದಾರೆ. ಹಾಗೆಂದರೆ ತ್ಯಂತ ಸೃಜನಶೀಲವಾದ ಕ್ರಿಯೆ. ಸ್ವಾಧ್ಯಾಯ ಆತ್ಮದ ಮಹಾ ಚಿಕಿತ್ಸಕ. ದು ಪರಿಪಕ್ವತೆಗೆ ಸಾಧನ. ಅದು ಮನಸ್ಸನ್ನು ನಿರಂತರ ಅರಳಿಸುತ್ತದೆ.



# ಕಮಲ ಮತ್ತು ಕೆಸರು

**ಭಾ**ರತದ ಸಾಂಕೇತಿಕ, ಪ್ರಾತಿನಿಧಿಕ ಪುಷ್ಪವೇ ಕಮಲ.

ಪದ್ಮ, ನಳಿನ, ಸಾರಸ, ಪುಷ್ಕರ, ತಾಮರಸ, ತಾವರೆ, ಅರವಿಂದ, ಶತಪತ್ರ, ರಾಜೀವ ಹೀಗೆ ಇದಕ್ಕೆ ಹಲವಾರು ಹೆಸರುಗಳು.

ಕಮಲ ಎಂಬುದು ಸೌಂದರ್ಯ, ಜ್ಞಾನ, ಸಾಕ್ಷಾತ್ಕಾರ, ಔದಾರ್ಯ, ಪಾವಿತ್ರ್ಯ, ನೈರ್ಮಲ್ಯ, ಪೂರ್ಣತ್ವಗಳ ಸಂಕೇತ.

ವೈಭವ, ಶೋಭೆ, ಆರೋಗ್ಯ, ಕೀರ್ತಿ, ಶುಚಿತ್ವ, ಶಾಶ್ವತ ಜೀವನ, ಅಮೃತ, ಶುದ್ಧ ಜ್ಞಾನ ಇವುಗಳ ಪ್ರತೀಕವೇ ಕಮಲ.

ಈ ಹೂವಿನ ಗುಣಗಾನ ಮಾಡದ ಸಂಸ್ಕೃತ ಕವಿ ಯಾರೂ ಇಲ್ಲ. ವೇದ ಕಾಲದಿಂದಲೂ ಕಮಲದ ಸೌಂದರ್ಯದ ಬಗ್ಗೆ ಲಕ್ಷಾಂತರ ಪದ್ಯಗಳ ರಚನೆಯಾಗಿದೆ. ಕವಿಗಳ, ದಾರ್ಶನಿಕರ, ಆಧ್ಯಾತ್ಮಿಕ ಅನ್ವೇಷಣೆ ಮಾಡುವವರ ಪ್ರೀತಿಯ ಹೂವು ಇದು.

ಕಮಲ ಮತ್ತು ದುಂಬಿ (ಭ್ರಮರ) ಸಂಸ್ಕೃತ ಕವಿಗಳ ಇನ್ನೊಂದು ಮೆಚ್ಚಿಗೆಯ ವಿಷಯ.

ವೇದಗಳಲ್ಲಿ ಇದನ್ನು ಸಮುದ್ರದ ಮಂದಿರಗಳು ಎಂದಿದೆ. ಅನೇಕ ಕವಿಗಳಿಗೆ ಇದು ಹೃದಯ ಕಮಲ.

ಸೂರ್ಯ ಹಾಗೂ ನಕ್ಷತ್ರಗಳಿಗೂ ಕಮಲಕ್ಕೂ ಸಂಬಂಧ. ಇವುಗಳ ತೇಜಸ್ಸಿನಿಂದಲೇ ಈ ಹೂವಿನ ಉತ್ಪತ್ತಿ. ದೇವ ದೇವತೆಗಳಿಗೂ ಕಮಲದ ಹಾರಗಳು. ಕಮಲದ ಶೃಂಗಾರ, ಅಲಂಕಾರ.

ವಿಶ್ವದ ಉತ್ಪತ್ತಿಗೂ ಕಮಲಕ್ಕೂ ಅನ್ಯೋನ್ಯ ಸಂಬಂಧ. ಇದರ ಬಗ್ಗೆ ತ್ತಿರೀಯ ಬ್ರಾಹ್ಮಣದಲ್ಲಿ ಒಂದು ಕತೆಯೂ ಇದೆ. ಇಡೀ ನೀರಿನ ೂಪದಲ್ಲಿದ್ದ ಭೂಮಿಯ ವಿಕಾಸಕ್ಕಾಗಿ ಪ್ರಜಾಪತಿ ಬರುತ್ತಾನೆ. ಅವನಿಗೆ ಂದು ಪುಷ್ಕರಪರ್ಣ ಕಾಣುತ್ತದೆ. ಅದರ ಆಧಾರ ಹುಡುಕಲು ್ರಜಾಪತಿಯು ವರಾಹರೂಪ ತಾಳಿ ನೀರಲ್ಲಿ ಮುಳುಗಿದ. ಅವನಿಗೆ ತಳ ಕ್ಕಿತು. ಅವನು ಅಲ್ಲೇ ಪವಡಿಸಿದ.

ನಮ್ಮ ದೇವ ದೇವತೆಗಳಿಗೂ ಕಮಲಕ್ಕೂ ಇನ್ನಷ್ಟು ಹತ್ತಿರದ ಸಂಬಂಧ. ್ರಹ್ಮ ಕಮಲದಲ್ಲೇ ಹುಟ್ಟಿದ. ಲಕ್ಷ್ಮೀ ಕಮಲದ ಮೇಲೆ ನಿಲ್ಲುತ್ತಾಳೆ, ಾತುಕೊಳ್ಳುತ್ತಾಳೆ. ಹೆಚ್ಚಿನ ಎಲ್ಲ ದೇವದೇವತೆಗಳ ಕೈಗಳಲ್ಲಿ ಕಮಲ ುಷ್ಪಗಳಿರುತ್ತವೆ.

ಕಮಲ ನೈರ್ಮಲ್ಯದ ಸಂಕೇತ. ಬದುಕಿನ ಗುಣಾತ್ಮಕ ವಿಷಯಗಳ ಾಂಭನ. ಎಲ್ಲ ಧರ್ಮದವರೂ ಕಮಲವನ್ನು ಮೆಚ್ಚುತ್ತಾರೆ.

ಇಷ್ಟೆಲ್ಲ ಶ್ರೇಷ್ಠ ಗುಣಗಳ ಈ ಸಂಕೇತ ಹುಟ್ಟಿರುವುದು ಕೆಸರಿನಲ್ಲಿ. ನಮ್ಮ ದುಕು ಕೆಸರಿನ ಕಮಲದಂತೆ. ಕಮಲಪತ್ರದ ಮೇಲಿನ ನೀರಿನ ನಿಗಳಂತೆ ಎಂದು ಕವಿ - ದಾರ್ಶನಿಕರು ಹೇಳಿದ್ದು ಇದಕ್ಕೇ ಇರಬೇಕು.

ನಮ್ಮ ಮನಸ್ಸು ಕೆಸರಿನ ನೀರಿನಂತೆ. ಅದನ್ನು ಎಷ್ಟು ಹೆಚ್ಚು ದಕುತ್ತೇವೋ ಅಷ್ಟು ಕೊಳಕಾಗುತ್ತದೆ. ಕೆಸರು ಹರಡುತ್ತದೆ. ಮನಸ್ಸು ಕೃತವಾಗುತ್ತದೆ. ಉದ್ರೇಕಗೊಳ್ಳುತ್ತದೆ.

ಕೆಲವರು ಬದುಕಿನಲ್ಲಿ ಕಮಲಗಳನ್ನೇ ನೋಡುತ್ತಾರೆ.

ಕೆಲವರು ಕೆಸರನ್ನೇ ಕೆದಕುತ್ತಾರೆ.

ಜೀವನ ಕಮಲದ ಹೂವಿನಂತಿರಬೇಕು. ಅದು ಕೆಸರು ೀರಾಗಬಾರದು.



# ಪ್ರಾರ್ಥನೆ - 1

**ಮಾ**ನವ ಮತ್ತು ದೈವಿಕ ಶಕ್ತಿಗಳ ನಡುವಿನ ಸುವರ್ಣ ಸೇತುವೆಯೇ ಪ್ರಾರ್ಥನೆ. ಅದು ಮನದಾಳದ ಕೂಗು, ಮೊರೆ.

ಪ್ರ+ ಅರ್ಥ = ನಮಗಿಂತಲೂ ಮೇಲಿನದಾದ ಶಕ್ತಿಯ ಬಳಿ ದೀನರಾಗಿ, ಮನಸ್ಸಿನ ತಳಮಳವನ್ನು ನಿವೇದಿಸಿ ಬೇಡಿಕೊಳ್ಳುವ ಒಂದು ಕ್ರಿಯೆ ಎಂಬುದು ಇದರ ಶಬ್ದಾರ್ಥ. ಆದರೆ ಅಷ್ಟೇ ಅಲ್ಲ. ಪ್ರಾರ್ಥನೆಯಲ್ಲಿ ಆದರ, ಗೌರವ, ಪ್ರೀತಿ, ಭಕ್ತಿ ಸರ್ವಾರ್ಪಣ ಭಾವನೆ ಅತಿ ಮುಖ್ಯ.

ಪ್ರಾರ್ಥನೆ ಎಂದರೆ ಸ್ವಾರ್ಥದಿಂದ, ಸಂಕುಚಿತ ಭಾವನೆಯಿಂದ ಅದು ಬೇಕು, ಇದು ಬೇಕು ಎಂದು ಲೌಕಿಕ ವಿಷಯಗಳನ್ನು ಬೇಡುವುದಲ್ಲ.

ನಮ್ಮ ಸಾಂಸ್ಕೃತಿಕ ಇತಿಹಾಸದಲ್ಲಿ ಇದಕ್ಕೆ ಬಹಳ ವಿಶಾಲವಾದ ಅರ್ಥವಿದೆ. ಅದಕ್ಕೆ ಭೌತಿಕ, ಸಾಮಾಜಿಕ, ನೈತಿಕ, ದೈವಿಕ - ಹೀಗೆ ಹಲವಾರು ಆಯಾಮಗಳಿವೆ.

ಆದಿಮಾನವನ ಕಾಲದಿಂದಲೂ ಮನುಷ್ಯ ಪ್ರಾರ್ಥನೆಯ ಶಕ್ತಿಯನ್ನು ತಿಳಿದು ಕೊಂಡಿದ್ದಾನೆ. ತನಗಿಂತಲೂ ಹೆಚ್ಚು ಶಕ್ತಿಶಾಲಿಯಾದ, ಎಲ್ಲವನ್ನೂ ಅರಿಯಬಲ್ಲ, ಸರ್ವವ್ಯಾಪಿ ಶಕ್ತಿಯೊಂದು ಇದೆ ಎಂದು ಮಾನವನಿಗೆ ತಿಳಿದು ಬಂದು ಅದೇ ಪ್ರಾರ್ಥನೆಯ ಹುಟ್ಟಿಗೆ ಕಾರಣವಾಯಿತು.

ಪಂಚಭೂತ (ಆಕಾಶ, ನೀರು, ಅಗ್ನಿ, ಭೂಮಿ, ವಾಯು) ಗಳ ಪ್ರಚಂಡ ಶಕ್ತಿಯ ಮುಂದೆ ತಾನು ಯಃಕಶ್ಚಿತ್ ಧೂಳೀಕಣ, ತಾನು ಏನೂ ಅಲ್ಲ ಎಂಬ ಅರಿವು ಮಾನವನಲ್ಲಿ ಪ್ರಾರ್ಥನೆಯ ಜ್ಯೋತಿಯನ್ನು ಅಂಕುರಿಸಿತು.

ನೈಸರ್ಗಿಕ ಉತ್ಪಾತ, ಭೂಕಂಪ, ಜಡಿಮಳೆ, ನೆರೆ, ಚಂಡಮಾರುತ, ಮಿಂಚು, ಉಲ್ಕಾಪಾತ ಮೊದಲಾದ ಪ್ರಕೃತಿಯ ಅದ್ಭುತ ಶಕ್ತಿಗಳನ್ನು ಕಂಡು ಅನುಭವಿಸಿದ ಮಾನವನಿಗೆ ತನ್ನ ಅಲ್ಪಶಕ್ತಿಯ ಅರಿವು ತನ್ನಿಂದ ತಾನೇ ಆಯಿತು.

ಈ ಶಕ್ತಿಗಳನ್ನು ತಾನು ಎದುರು ಹಾಕಿಕೊಳ್ಳಕೂಡದು. ತಾನು, ತನ್ನ ಪರಿವಾರ ಅದರಿಂದ ಉಳಿಯಬೇಕು ಎಂಬುದೇ ಅವನ ಹಂಬಲವಾಯಿತು. 'ದೇವರ ಭಯವೇ ಜ್ಞಾನದ ಆರಂಭ' ಎಂಬ ಗಾದೆ ಮಾತು ಇದಕ್ಕೆ ಸಾಕ್ಷಿ.

ವಿಶ್ವದ ಎಲ್ಲ ಕಡೆಯ ಮಾನವರಿಗೂ ಇದೇ ಅನುಭವ. ಎಂದೇ ಪ್ರಾರ್ಥನೆ ಎಂಬುದು ಮನುಷ್ಯನ ಸ್ವಭಾವಧರ್ಮವೇ ಆಗಿಬಿಟ್ಟಿತು. ಸಹಜಪ್ರವೃತ್ತಿಯಾಯಿತು. ಅದು ಎಲ್ಲ ಮತ, ಧರ್ಮದವರಿಗೂ ಆದಿಯಾಯಿತು. ಆಯಾ ಪ್ರದೇಶದ, ಸಾಂಸ್ಕೃತಿಕ ಹಿನ್ನೆಲೆಯಲ್ಲಿ ಪ್ರಾರ್ಥನೆ ರೂಪುಗೊಂಡಿತು.

ಬೃಹದಾರಣ್ಯಕ ಉಪನಿಷತ್ತಿನಲ್ಲಿ ಬರುವ 'ಅಸತ್ತಿನಿಂದ ಸತ್ಯದೆಡೆಗೆ, ಕತ್ತಲೆಯಿಂದ ಬೆಳಕಿನೆಡೆಗೆ, ಮೃತ್ಯುವಿನಿಂದ ಅಮೃತತ್ವದ ಕಡೆಗೆ ನಮ್ಮನ್ನು ಕೊಂಡೊಯ್ಯು' ಎಂಬ ಪ್ರಾರ್ಥನೆ ಇದೇ ಹಿನ್ನೆಲೆಯಲ್ಲಿ ಹುಟ್ಟಿತು. ಇದು ಸಾರ್ವಕಾಲಿಕ ಬೇಡಿಕೆ.

ಪ್ರಾರ್ಥನೆ ಸಾಮೂಹಿಕವಾಗಿಯೂ ಒಂದು ಮಹತ್ತ್ವದ, ಶಕ್ತಿಯುತ ಕ್ರಿಯೆ ಆಗಬಲ್ಲುದು. ಎಲ್ಲರೂ ಒಂದೇ ಮನಸ್ಸಿನವರಾಗಿ ಪ್ರಾರ್ಥನೆ ಮಾಡಿದಾಗ ಅದಕ್ಕೆ ಅದ್ಭುತ ಶಕ್ತಿ ಬರುತ್ತದೆ. ಪ್ರಾಚೀನ ಕಾಲದಿಂದಲೂ ಸತ್‌ಸಂಕಲ್ಪ ಮಾಡುವಾಗ ಸಾಮೂಹಿಕ ಪ್ರಾರ್ಥನೆಯನ್ನು ಮಾಡುತ್ತಾರೆ. ಅದು ಶಕ್ತಿವರ್ಧಕ, ಕಾರ್ಯಸಾಧಕ.

ಚೀನದಲ್ಲಿ ಕ್ರಿ.ಪೂ. ಐದನೆಯ ಶತಮಾನದಲ್ಲಿ ರೂಪುಗೊಂಡ 'ಲಾವೊ ಟ್ಸು ಲವೊ ತೆ ಚಿಂಗ್' ವಿಚಾರ ಪ್ರಣಾಳಿಕೆಯ ವಿವೇಕದ ಮಾತುಗಳಲ್ಲಿ ಪ್ರಾರ್ಥನೆಯ ಬಗ್ಗೆ ಒಂದು ಸುಂದರ ಸನ್ನಿವೇಶವಿದೆ.

ಸೂರ್ಯ ಉಜ್ವಲವಾಗಿ ಉರಿಯುತ್ತಿರುತ್ತಾನೆ. ಧರ ಧರ ಮಳೆ ಬರುತ್ತಿದೆ. ಪರ್ವತಗಳು ಗಿರಿ ಕಂದರಗಳಿಂದ ಆಕಾಶವನ್ನು ಚುಂಬಿಸುವಂತೆ ಮೇಲೇಳುತ್ತವೆ. ತೆರೆಗಳು ಸಮುದ್ರದೆಡೆಗೆ ಹಾರಿ ಕುಪ್ಪಳಿಸುತ್ತವೆ. ಭೂಮಿ ಉಸಿರಾಡುತ್ತದೆ. ವಾಯು ವಿಹಾರ ಮಾಡುತ್ತಲೇ ಇರುತ್ತದೆ.

ಇವುಗಳೊಂದಿಗೆ ಸ್ಪಂದಿಸುತ್ತ, ಉದಾತ್ತವಾಗಿ ಒಂದಾಗುತ್ತ, ಮನಸ್ಸನ್ನು ಬರಿದು ಮಾಡಿಕೊಂಡು ಐಕ್ಯವಾಗುವುದೇ ಪ್ರಾರ್ಥನೆ. ಪ್ರಕೃತಿಯೊಂದಿಗೆ ಸಂಗಮಿಸುವ ಈ ಸಹಜ ಸ್ಥಿತಿಯೇ ಪ್ರಾರ್ಥನೆ. ಅದೇ ಶಾಂತಿಯ ಸೋಪಾನ. ಬರಿದಾದ ಮನಸ್ಸು ಮತ್ತೆ ಶಾಂತಿಯಿಂದ ತುಂಬುತ್ತದೆ.

ಪ್ರಾರ್ಥನೆಯಲ್ಲಿ ನಮ್ಮ ದೌರ್ಬಲ್ಯಗಳನ್ನು ನಾವೇ ತೋಡಿಕೊಂಡು ವಿಮರ್ಶಿಸುತ್ತೇವೆ. ತಿದ್ದಿಕೊಳ್ಳುವ ಸಂಕಲ್ಪ ಮಾಡುತ್ತೇವೆ. ವಿಕಾಸಕ್ಕೆ ಇದೇ ರಹದಾರಿ.



# ಪ್ರಾರ್ಥನೆ - 2

ಪ್ರಾರ್ಥನೆಯಲ್ಲಿ ಮುಖ್ಯವಾಗಿ ಎರಡು ವಿಧ —

- ನಿಷ್ಕಾಮ
- ಸಕಾಮ

ಯಾವುದೇ ಬೇಡಿಕೆ ಇಲ್ಲದೆ, ''ದೇವರೇ ನಿನ್ನ ಇಚ್ಛೆ ಇದ್ದಂತೆ ಆಗಲಿ'' ಎಂದು ತನ್ನ ಅಳಲನ್ನು ಸಮರ್ಪಿಸುವ ಬಗೆ ನಿಷ್ಕಾಮ. ಇದು ಅಂತರ್ಮುಖೀ ಪ್ರಾರ್ಥನೆ. ಈ ಬಗೆಯ ಪ್ರಾರ್ಥನೆ ನಿಜವಾಗಿಯೂ ಲೋಕಕಲ್ಯಾಣಕ್ಕಾಗಿ ಇರುತ್ತದೆ.

ಧನ-ಧಾನ್ಯ, ಇಷ್ಟ-ಸಂಪತ್ತು, ಪರಿವಾರ, ಆರಾಮ ಜೀವನ, ಬಡ್ತಿ, ಲಾಭ ಇತ್ಯಾದಿ ಕೆಲಸಗಳಿಗಾಗಿ ಮಾಡಿದ ಪ್ರಾರ್ಥನೆ ಸಕಾಮವಾಗುತ್ತದೆ. ಇದು ಬಹಿರ್ಮುಖೀ ಪ್ರಾರ್ಥನೆ.

ಮೊದಲನೆಯದು ಯಾವ ಸ್ವಂತ ಸುಖಕ್ಕೂ ಅಲ್ಲ, ಅಲ್ಲಿ 'ಸರ್ವೇಜನಾಃ ಸುಖಿನೋ ಭವಂತು' ಎಂಬ ಕಳಕಳಿ ಇದೆ. ಎರಡನೆಯದು ಕೇವಲ ತನ್ನ ಸ್ವಾರ್ಥಕ್ಕಾಗಿ ಮಾತ್ರ ಮಾಡುವ ಬೇಡಿಕೆ.

ಆದರೆ ಕೇವಲ ಲೌಕಿಕ ಸುಖ, ಸಂಪತ್ತು, ವೈಭವ, ಸೌಲಭ್ಯ ಇವುಗಳಿಂದ ಮಾತ್ರ ಮನುಷ್ಯ ತೃಪ್ತಿ ಪಟ್ಟುಕೊಳ್ಳುತ್ತಾನೆಯೆ? ತನ್ನ ಬದುಕು ಸಾರ್ಥಕವಾಯಿತು ಎಂಬ ಸಮಾಧಾನ ಅವನಿಗೆ ಸಿಗುತ್ತದೆಯೆ?

ಮಾನವನ ಮನಸ್ಸಿನ ವಿಕಾಸವೇ ಅವನ ಬೆಳವಣಿಗೆಯ ಮುಖ್ಯ ಲಕ್ಷಣ. ಇದು ಅವನ ಮನಸ್ಸಿನ ಸಂಸ್ಕೃತಿಯ ಉದಾತ್ತಭಾವದ ವಿಕಾಸ. ಲೌಕಿಕ ಸುಖ, ಸಂಪತ್ತು ಎಲ್ಲವೂ ತಾತ್ಕಾಲಿಕ ಎಂಬ ಸತ್ಯ ಅವನಿಗೆ ಹೊಳೆಯಬಹುದು. ತನ್ನ ಇತಿಮಿತಿಗಳ ಕೊರತೆ, ಚೌಕಟ್ಟು ಅವನಿಗೆ ಅರಿವಾಗಿ ಅವನು ಅನ್ವೇಷಣೆ ಆರಂಭಿಸುತ್ತಾನೆ. ಈ ಅನ್ವೇಷಣೆಯ ಒಂದು ಮಾರ್ಗವೇ ಪ್ರಾರ್ಥನೆ.

ವೇದಕಾಲದಲ್ಲಿ ಕೂಡ ''ಅಗ್ನಿಯೇ ನಮಗೆ ಸರಿಯಾಗಿ

ಾರ್ಗದರ್ಶನ ಮಾಡು'', ''ಹೇ ವರುಣನೇ ನಾನು ಮಾಡಿದ
ುಣಭಾರದಿಂದ ನನ್ನನ್ನು ಮುಕ್ತನಾಗಿ ಮಾಡು'' ಎಂಬ ಮೊರೆ
ಳುತ್ತದೆ.

ಮಾನವನಿಗೆ ಮೊದಲಿನಿಂದಲೂ ಗೊತ್ತಾಗಿಬಿಟ್ಟಿದೆ. ವಿಷಯ ಸುಖ
ಚ್ಚಾದಷ್ಟು, ಸಂಪತ್ತು ಜಾಸ್ತಿಯಾದಷ್ಟು ಲೋಭ, ಮೋಹ, ಆಸೆ,
ರ್ಥಗಳೂ ಹೆಚ್ಚಾಗುತ್ತವೆ. ಅದಕ್ಕಾಗಿ ಅನೇಕ ಅಹಿತ ಕೆಲಸಗಳನ್ನು
ಾಡಲು ಅವನು ಮುಂದುವರಿಯುತ್ತಾನೆ. ಮನಸ್ಸು ವಿಕೃತವಾಗುತ್ತದೆ.
್ರಿಯರ್ಯ ಬೆಳೆಯುತ್ತದೆ. ಅನೇಕ ಅನರ್ಥಗಳೇ ಉಂಟಾಗುತ್ತವೆ.
ವುಗಳಿಗೆಲ್ಲ ಒಳ್ಳೆಯ ತಡೆ ಎಂದರೆ ಶುದ್ಧ ಮನಸ್ಸಿನಿಂದ ಮಾಡುವ
್ರಾರ್ಥನೆ.

ವ್ಯಷ್ಟಿಯಿಂದ ಸಮಷ್ಟಿಯಾಗುತ್ತದೆ. ವ್ಯಕ್ತಿಯಿಂದ ರಾಷ್ಟ್ರವಾಗುತ್ತದೆ.
ಲ್ಲರ ಸುಖವೇ ತನ್ನ ಸುಖ ಎಂಬ ಉದಾತ್ತಭಾವದ ವಿಶಾಲ ದೃಷ್ಟಿಯ
್ರಾರ್ಥನೆ ಹೆಚ್ಚು ಪರಿಣಾಮಕಾರಿ.

ಪ್ರಾರ್ಥನೆಯಲ್ಲಿ ನೈತಿಕ ಹಾಗೂ ಆತ್ಮವಿಕಾಸ ಹಾಗೂ ಎಲ್ಲರ ಉತ್ಕರ್ಷ
ೀಗೆ ಹಲವು ಕೋರಿಕೆಗಳಿರುತ್ತವೆ —

*ಸರ್ವೇಽತ್ರ ಸುಖಿನಃ ಸಂತು ಸರ್ವೇ ಸಂತು ನಿರಾಮಯಾಃ ।*
*ಸರ್ವೇ ಭದ್ರಾಣಿ ಪಶ್ಯಂತು ಮಾ ಕಶ್ಚಿದ್ ದುಃಖಮಾಪ್ನುಯಾತ್ ॥*
*ದುರ್ಜನಃ ಸಜ್ಜನೋ ಭೂಯಾತ್ ಸಜ್ಜನಃ ಶಾಂತಿಮಾಪ್ನುಯಾತ್ ।*
*ಶಾಂತೋ ಮುಚ್ಯೇತ ಬಂಧೇಭ್ಯೋ ಮುಕ್ತಶ್ಚಾನ್ಯಾನ್*
*ವಿಮೋಚಯೇತ್ ॥*

13254

(ಈ ಜಗತ್ತಿನಲ್ಲಿ ಎಲ್ಲರೂ ಸುಖವಾಗಿರಲಿ, ಎಲ್ಲರೂ
ರೋಗಿಗಳಾಗಿರಲಿ. ಎಲ್ಲರಿಗೂ ಶುಭದರ್ಶನವಾಗಲಿ. ಯಾರಿಗೂ
ುಃಖ ಆಗದಿರಲಿ. ದುರ್ಜನರು ಸಜ್ಜನರಾಗಲಿ. ಸಜ್ಜನರಿಗೆ ಶಾಂತಿ ಸಿಗಲಿ.
ಾಂತಿ ಸಿಕ್ಕವರಿಗೆ ಸಂಸಾರದಿಂದ ಮೋಕ್ಷ ಪ್ರಾಪ್ತಿಯಾಗಲಿ. ಯಾರು ಹೀಗೆ
ುಕ್ತರಾಗುತ್ತಾರೋ ಅವರು ಇತರರನ್ನೂ ಮುಕ್ತಗೊಳಿಸಲಿ)

ಎಲ್ಲರ ಒಳಿತನ್ನು ಹಾರೈಸುವಂಥ ಪ್ರಾರ್ಥನೆಯೇ ನಿಜವಾದ ಪ್ರಾರ್ಥನೆ.



# ಪ್ರಾರ್ಥನೆ - 3

**ಪ**ಶುಪಕ್ಷಿಗಳನ್ನು ಪ್ರೀತಿಸುವ ಮೂಲಕ ದೇವಸಾನ್ನಿಧ್ಯ ಅನುಭವಿಸಿದ ಸಂತ ಫ್ರಾನ್ಸಿಸ್ (ಅಸ್ಸಿಸಿ) ಅವರ ಪ್ರಾರ್ಥನೆಯ ಕಳಕಳಿ ನೋಡಿ -

ಹೇ ದೇವರೆ! ನಿನ್ನ ಶಾಂತಿಯ ಮಾಧ್ಯಮವನ್ನಾಗಿ ನನ್ನನ್ನು ರೂಪಿಸು. ಎಲ್ಲಿ ದ್ವೇಷವಿದೆಯೋ ಅಲ್ಲಿ ಪ್ರೀತಿಯನ್ನು ಚಿಗುರಿಸುವಂತೆ ಮಾಡು. ಎಲ್ಲಿ ಕೆಡುಕು ಇದೆಯೋ ಅದನ್ನು ಕ್ಷಮಿಸುವಂತಾಗಲಿ. ಎಲ್ಲಿ ಸಂಶಯವಿದೆಯೋ ಅಲ್ಲಿ ನಂಬಿಕೆ ಉಂಟಾಗಲಿ. ಎಲ್ಲಿ ನಿರಾಸೆ ಕವಿದಿದೆಯೋ ಅಲ್ಲಿ ಭರವಸೆ ಮೂಡಲಿ. ಎಲ್ಲಿ ಕತ್ತಲೆ ಇದೆಯೋ ಅಲ್ಲಿ ಬೆಳಕಾಗಲಿ. ಎಲ್ಲಿ ದುಃಖವಿದೆಯೋ ಅಲ್ಲಿ ಆನಂದಾನುಭವವಾಗಲಿ.

ಪ್ರಾರ್ಥನೆ ಗುಣಾತ್ಮಕವಾಗಿ, ಧನಾತ್ಮಕವಾಗಿ ಇರುವುದೇ ಮುಖ್ಯ. ಅದು ಬದುಕಿನಲ್ಲಿ ಭರವಸೆ ಮೂಡಿಸಬೇಕಾದುದು ಅಗತ್ಯ. ಸಮಸ್ಯೆಗಳನ್ನು ಎದುರಿಸಲು ಆತ್ಮವಿಶ್ವಾಸ ಉಂಟುಮಾಡುವುದೇ ಅದರ ಉದ್ದೇಶ. ನಮ್ಮೊಳಗಿನ ಈ ಶಕ್ತಿಯನ್ನೇ ನಾವು ಉದ್ದೀಪನಗೊಳಿಸಿಕೊಳ್ಳಬೇಕಾಗುತ್ತದೆ. ನಮ್ಮೊಳಗಿನ ಈ ಅನ್ವೇಷಣೆಯೇ ಪ್ರಾರ್ಥನೆಯ ಆರಂಭ.

ಪ್ರಾರ್ಥನೆಯ ಸಾಮಾಜಿಕ ಆಶಯವೂ ಒಂದಿದೆ. ಅದು ಧಾರ್ಮಿಕ ಆಶಯದಿಂದ ಬಹಳ ಭಿನ್ನವಾಗಿಲ್ಲ. ನಮ್ಮ ಸಮಾಜದ ವಿಸ್ತಾರವೇ ನಮ್ಮ ರಾಷ್ಟ್ರ ನಮ್ಮ ಮಾತೃಭೂಮಿ. ಈ ಮಾತೃಭೂಮಿಯ ಸಮೃದ್ಧಿಯೇ ನಮ್ಮ ಉತ್ಕರ್ಷ ಎಂಬ ಭಾವನೆ ಬಲವಾಯಿತು. ರಾಷ್ಟ್ರ ಚೆನ್ನಾಗಿದ್ದರೆ ವ್ಯಕ್ತಿಯ ಬದುಕೂ ಸುಖಕರವಾಗಿರುತ್ತದೆ. ಅದಕ್ಕಾಗಿ ರಾಷ್ಟ್ರೀಯ ಪ್ರಾರ್ಥನೆಯ ಸ್ವರೂಪ ವಿಕಾಸವಾಯಿತು. ಇದನ್ನು ನಾವು ಯಜುರ್ವೇದದಲ್ಲೇ ಕಾಣುತ್ತೇವೆ.

ಪ್ರಾರ್ಥನೆ ಜೀವನದ ಒಂದು ಅಭಿನ್ನ ಅಂಗ. ಅದೇ ಸಹಜ ಪ್ರವೃತ್ತಿ. ಭಕ್ತಿಮಾರ್ಗದಲ್ಲಿ ಪ್ರಾರ್ಥನೆಗೆ ಇನ್ನಷ್ಟು ಹೆಚ್ಚು ಮಹತ್ತ್ವ.

ನ ಧನಂ ನ ಜನಂ ನ ಸುಂದರೀ

ಕವಿತಾಂ ವಾ ಜಗದೀಶ ಕಾಮಯೇ

ಮಮ ಜನ್ಮನಿ ಜನ್ಮನೀಶ್ವರೇ
ಭವತಾದ್ ಭಕ್ತಿರತುಹೈಕೀ ತ್ವಯಿ

(ಹೇ ಜಗದೀಶ್ವರಾ ! ನನಗೆ ಧನ, ಜನ, ಸುಂದರ ಸ್ತ್ರೀ, ಕಾವ್ಯಶಕ್ತಿ ಇವಾವುಗಳ ಮನೆಯೂ ಇಲ್ಲ. ನನ್ನ ಜನ್ಮ ಜನ್ಮಾಂತರದಲ್ಲೂ ನಿನ್ನ ಭಕ್ತಿ ಮಾಡುವ ಕೃಪೆ ಯೊಂದಿರಲಿ. ಅದೇ ನನ್ನ ಪ್ರಾರ್ಥನೆ.)

ನೈತಿಕ ಹಾಗೂ ಆತ್ಮ ವಿಕಾಸದ ಇಂಥ ಪ್ರಾರ್ಥನೆ ವಿಶ್ವಕಲ್ಯಾಣದ ಹೇತುವಿನಿಂದ ಕೂಡಿರುತ್ತದೆ. ಯೇಸುಕ್ರಿಸ್ತನು ತನ್ನ ಶಿಷ್ಯರೊಂದಿಗೆ ಕೂಡಿ ಮಾಡಿದ ಒಂದು ಪ್ರಾರ್ಥನೆ ಮಾನವನ ಆಧ್ಯಾತ್ಮಿಕ ಕಲ್ಯಾಣ ಚಿಂತನೆಯಿಂದ ಕೂಡಿದೆ—

ಪರಲೋಕದ ನನ್ನ ತಂದೆಯೇ
ನಿನ್ನ ಹೆಸರು ಪವಿತ್ರವಾಗಲಿ, ನಿನ್ನ ರಾಜ್ಯ ಬರಲಿ,
ಸ್ವರ್ಗದಲ್ಲಿ ಹೇಗೋ ಅದೇ ರೀತಿ ಭೂಮಿಯಲ್ಲೂ ನಿನ್ನ ರಾಜ್ಯ ಬರಲಿ,
ನಮ್ಮ ಇಂದಿನ ಅನ್ನ ನಮಗೆ ಇಂದೇ ಸಿಗಲಿ
ನಮ್ಮ ತಪ್ಪುಗಳನ್ನು ನಾವು ಹೇಗೆ ಕ್ಷಮಿಸುತ್ತೇವೊ
ಅದೇ ರೀತಿ ನೀನು ನಮ್ಮ ತಪ್ಪುಗಳನ್ನು ಕ್ಷಮಿಸು,
ನಾವು ಮೋಹದಲ್ಲಿ ಬೀಳದಂತೆ ಮಾಡು,
ಆದರೆ ಕೆಡುಕಿನಿಂದ ನಮ್ಮನ್ನು ಉಳಿಸು.

ಕ್ರೈಸ್ತರು ಪ್ರಾರ್ಥನೆ ಎಂದರೆ ದೇವರೊಂದಿಗೆ ಸಂಭಾಷಣೆ ಎಂದು ಭಾವಿಸುತ್ತಾರೆ. ನಮ್ಮ ದಾಸರು, ಸಂತರು ಕೂಡ ಇದೇ ರೀತಿ ದೇವರೊಡನೆ 'ಮಾತುಕತೆ' ಯಾಡು ತ್ತಿದ್ದರು. ಬದುಕು ಇಡೀ ಪ್ರಾರ್ಥನಾಮಯವಾಗಲಿ ಎಂದು ಕ್ರೈಸ್ತರು ಭಾವಿಸುತ್ತಾರೆ. ಎಂಥ ಪವಿತ್ರ ಆಶಯವದು! ಇಸ್ಲಾಂನಲ್ಲಿ ಕೂಡ ದಿನಕ್ಕೆ ಐದು ಬಾರಿ ನಮಾಜ್ ಮಾಡಬೇಕು ಎಂಬುದು ಒಂದು ನಿತ್ಯಕರ್ಮ.

ಮಹಾತ್ಮಾ ಗಾಂಧೀಜಿಯವರು ರಾಷ್ಟ್ರೀಯ ಆಂದೋಲನದಲ್ಲಿ ಸರ್ವಧರ್ಮ ಪ್ರಾರ್ಥನೆ ಮಾಡಿ ಎಲ್ಲರನ್ನೂ ಒಂದಾಗಿಸಲು ಪ್ರಯತ್ನಿಸಿದರು. ಅದರ ಒಟ್ಟು ಆಶಯವೇ 'ಸಬ್ ಕೋ ಸನ್ಮತಿ ದೇ ಭಗವಾನ್.'



# ಹಂಸ

**ಭಾ**ರತೀಯ ಸಾಹಿತ್ಯ, ಕಲೆ, ಸಂಗೀತ, ಶಿಲ್ಪ, ಅಧ್ಯಾತ್ಮ ಇವುಗಳಲ್ಲೆಲ್ಲ ಹಂಸಕ್ಕೆ ವಿಶೇಷ ಮಹತ್ತ್ವ. ಅದೊಂದು ಉನ್ನತ ಸಂಕೇತ.

ನೈರ್ಮಲ್ಯ, ಶುದ್ಧ, ಉಚ್ಚ, ವಿವೇಕ, ತಾರತಮ್ಯ, ಪ್ರಬುದ್ಧತೆ ಇವುಗಳಿಗೆ ಹಂಸ ಒಂದು ದೃಷ್ಟಾಂತ.

ಕಳೆದ ಐದು ಸಾವಿರ ವರ್ಷಗಳಿಂದ ಭಾರತೀಯ ಸಾಹಿತ್ಯದಲ್ಲಿ ಹಂಸ ಏಕಮೇವಾದ್ವಿತೀಯ ಪಕ್ಷಿಯಾಗಿ ಮೆರೆದಿದೆ. ಆದರೆ ಹಂಸಕ್ಕೆ ಪಕ್ಷಿಗಿಂತಲೂ ಹೆಚ್ಚಿನ ಮೌಲ್ಯವನ್ನು ದಾರ್ಶನಿಕರು, ಕಲಾವಿದರು, ಋಷಿ -ಮುನಿಗಳು ಕೊಡುತ್ತ ಬಂದಿದ್ದಾರೆ.

ಋಗ್ವೇದ ಕಾಲದಿಂದಲೂ ಹಂಸ ಅತಿ ಪರಿಚಿತ ಪಕ್ಷಿ. ಅಪ್ಪಟ ಭಾರತೀಯ ಲಾಂಛನ.

ಹಂಸಕ್ಕೆ ಎಷ್ಟು ಗೌರವ ಎಂದರೆ ಸೃಷ್ಟಿ ಮಾಡಿದ ಬ್ರಹ್ಮನಿಗೆ ಹಾಗೂ ವಿದ್ಯಾಧಿದೇವತೆ ಸರಸ್ವತಿಗೆ ಹಂಸವೇ ವಾಹನ.

ಹಂಸ ಶುಭ್ರತೆ ಮತ್ತು ದಾಂಪತ್ಯದ ಸಂಕೇತವೂ ಹೌದು.

ಸಂತಾಲ ಆದಿವಾಸಿಗಳಲ್ಲಿ ಒಂದು ಕತೆ ಇದೆ. ಮಾರಡಂಬರು ಎಂಬ ಅವರ ದೇವತೆ ಸೃಷ್ಟಿಯ ಆದಿಯಲ್ಲಿ ಹಂಸಗಳ ಜೋಡಿ ತಯಾರಿಸಿ ನರ-ನಾರಿಯ ಸೃಷ್ಟಿ ಮಾಡುವ ಕತೆ ಇದೆ.

ನಳ-ದಮಯಂತಿಯರನ್ನು ಒಂದುಗೂಡಿಸಿದ್ದು ಹಂಸ. ಶಕುಂತಳೆಗೂ ಹಂಸ ಪ್ರೀತಿಯ ಸಂಗಾತಿ.

ಹಾಲು ಮತ್ತು ನೀರನ್ನು ಬೆರೆಸಿದರೆ ಹಾಲನ್ನು ಮಾತ್ರ ಹೀರಿಕೊಳ್ಳುವ ವಿಶೇಷ ಶಕ್ತಿ ಹಂಸಕ್ಕಿದೆ. ಅದೇ ಹಂಸ ಕ್ಷೀರ ನ್ಯಾಯ ಅಥವಾ ನೀರಕ್ಷೀರ ವಿವೇಕ.

ಬದುಕಿನಲ್ಲಿ ಒಳ್ಳೆಯದಿದ್ದುದನ್ನು ಮಾತ್ರ ಆಯ್ಕೆ ಮಾಡಿ ಸ್ವೀಕರಿಸಬೇಕು ಎಂಬ ಆದರ್ಶವನ್ನು ಹಂಸ-ಕ್ಷೀರ ವಿವೇಕ ಹೇಳುತ್ತದೆ.

ಕಮಲದ ದಂಟು ಹಂಸದ ಪ್ರಿಯ ಆಹಾರ. ಸಂಸ್ಕೃತ ಕವಿಗಳಂತೂ ಹಂಸ ಮತ್ತು ಅದರ ಗುಣಗಳ ಬಗ್ಗೆ ಸಾಕಷ್ಟು ಗುಣಗಾನ ಮಾಡಿ, ಹಾಡಿ ಹೊಗಳಿದ್ದಾರೆ.

ಹಂಸಗಳ ಮೂಲ ಸ್ಥಾನ ಮಾನಸ ಸರೋವರ. ವಸಂತ ಋತುವಿನಲ್ಲಿ ಅದು ಆಹಾರ ಹುಡುಕಿ ಮತ್ತೆ ಮಳೆಗಾಲದಲ್ಲಿ ಮಾನಸ ಸರೋವರಕ್ಕೆ ಮರಳುತ್ತದೆ. ಇದನ್ನು ಮಹಾಕವಿ ಕಾಳಿದಾಸನು ಮೇಘದೂತದಲ್ಲಿ ಬಲು ಆಲಂಕಾರಿಕವಾಗಿ, ಉಪಮೆಯಾಗಿ ಉಪಯೋಗಿಸಿದ್ದಾನೆ.

ತನ್ನ ಕೊಕ್ಕಿನಲ್ಲಿ ಕಮಲನಾಳವನ್ನು ತೆಗೆದುಕೊಂಡು ಮಾನಸ ಸರೋವರದಿಂದ ಕೈಲಾಸ ಪರ್ವತಕ್ಕೆ ಹೋಗುವ ಹಂಸದ ದೃಶ್ಯ ಅನುಪಮವಾದುದು ಎಂದು ಕಾಳಿದಾಸನು ಹೊಗಳಿದ್ದಾನೆ.

ಬಹುಮತದ ದಿನಗಳಾದ ಇಂದು ಒಳ್ಳೆಯ ಮೌಲ್ಯಕ್ಕೆ ಏನು ಬೆಲೆ ? ಇಡೀ ಸರೋವರ ತುಂಬ ಬಕಪಕ್ಷಿಗಳೇ ಇವೆ. ಒಂದೇ ಒಂದು ಹಂಸ ಸಾಕು. ಕವಿ ಹೇಳುತ್ತಾನೆ - ಒಂದೇ ಒಂದು ಹಂಸದಿಂದ ಬರುವ ಶೋಭೆ ಸಾವಿರಾರು ಬಕಪಕ್ಷಿಗಳಿಂದ ಬರಲಾರದು.

ಹಂಸ ಎಂಬುದು ಅತ್ಯಂತ ಉತ್ತುಂಗ ಹಾಗೂ ತುರೀಯಾವಸ್ಥೆ ಹೇಳುವ ಶಬ್ದವೂ ಹೌದು. ಪರಮಹಂಸ ಎನ್ನುತ್ತೇವೆ. ದೇವರಿಗೆ ಪರ್ಯಾಯನಾಮನಾಗಿ ಹಂಸವನ್ನು ಬಳಸುವುದುಂಟು. ಹಂಸ ಹೆಸರಿನ ಸನ್ಯಾಸ ಆಶ್ರಮವಿದೆ. ಸೂರ್ಯನಿಗೂ ಹಂಸಕ್ಕೂ ಬಲು ಆತ್ಮೀಯತೆ. ಅದೇ ಒಂದು ರೂಪಕ.

ಸೋತಾಗ ತಗ್ಗದೆ ಸಮತೋಲ ಇಟ್ಟುಕೊಳ್ಳುವುದೇ ಪ್ರಬುದ್ಧತೆ. ಅದೇ ವಿವೇಕ.

ಸೋತಾಗ ನಗಬೇಕು. ತತ್ತ್ವಜ್ಞಾನಿಯ ನಗು ಅಂತಾರಲ್ಲ, ಹಾಗೆ. ಸತ್ ಸಂಕಲ್ಪದ ಶಕ್ತಿ ಅದ್ಭುತ.

ಅದು ಕುಸುಮಾದಪಿ ಮೃದೂನಿ, ವಜ್ರಾದಪಿ ಕಠೋರಾಣಿ.

ಒಳ್ಳೆಯದನ್ನು, ಚೆನ್ನಾಗಿರುವುದನ್ನು, ಶ್ರೇಷ್ಠವಾಗಿರುವುದನ್ನೇ ಮಾಡುತ್ತೇನೆ ಎಂಬ ಸತ್ ಸಂಕಲ್ಪವೇ ಆನಂದದಾಯಕ. ಆ ಭಾವನೆಯೇ ಅರ್ಧ ರಾಜ್ಯ ಗೆದ್ದಂತೆ.

ಆಗ ಸಾಫಲ್ಯ-ವೈಫಲ್ಯಗಳಿಗೆ ವ್ಯತ್ಯಾಸವೇ ಇಲ್ಲವಾಗುತ್ತದೆ.



3254

# ನಿಮ್ಮ ವ್ಯಕ್ತಿತ್ವಕ್ಕೊಂದು ಕನ್ನಡಿ ಹಿಡಿಯಿರಿ

## ತ್ರಿ - ವಿ - ಕ್ರಮ - ಮೂರು ಭಾಗಗಳಲ್ಲಿ

## ವಿಚಾರ ವಿವೇಕ ವಿಕಾಸ

ಮನಸ್ಸಿಗೆ ಕನ್ನಡಿ ಹಿಡಿದು ನಮ್ಮ ನಮ್ಮ ಆತ್ಮಸ್ವರೂಪಗಳ ಸ್ವ-ವಿಮರ್ಶೆಯನ್ನು ನಾವು ನಾವೇ ಮಾಡಿಕೊಳ್ಳುವುದು ತುಂಬ ರೋಚಕ ಕೆಲಸ. ಜೀವನ ಸಂಸ್ಕಾರ - ಪರಿಷ್ಕಾರಗಳಿಗೆ ಇವು ಕ್ಷ-ಕಿರಣ ದೃಷ್ಟಿ ಕೊಡುತ್ತವೆ. ವಾಮನನಾಗಿ ಹುಟ್ಟಿದ ಮಾನವನು ತನ್ನ ಬುದ್ಧಿಮತ್ತೆ ಮತ್ತು ಕೃತುಶಕ್ತಿಗಳಿಂದ ತ್ರಿವಿಕ್ರಮನಾಗಬಹುದು ಎಂಬ ಹಿನ್ನೆಲೆಯಲ್ಲಿ ಇಲ್ಲಿ 150ಕ್ಕೂ ಹೆಚ್ಚು ಬರಹಗಳು ಮೂಡಿವೆ. ಲೌಕಿಕ ಬೆಳವಣಿಗೆಗೆ ಆಧ್ಯಾತ್ಮಿಕ ಅಮೃತಸ್ಪರ್ಶ, ಜೀವನ ಸಂಜೀವಿನಿ ಸಿಂಚನ ಈ ಬರಹಗಳ ವೈಶಿಷ್ಟ್ಯ. ಅನುಭವಿ ಬರಹಗಾರರಾದ **ಸಂತೋಷಕುಮಾರ ಗುಲ್ವಾಡಿಯವರ** ಲೇಖನಿಯಿಂದ ಹೊರಬಂದ ವಿಶಿಷ್ಟ, ಜೀವನೋಪಯೋಗಿ, ಸ್ವಾರಸ್ಯಕರ ಲೇಖನಮಾಲೆ. ವೈಯುಕ್ತಿಕ ಅಭಿವೃದ್ಧಿ ಮಾಡಿಕೊಳ್ಳಲು ಬಯಸುವವರು ಓದಲೇ ಬೇಕಾದ ಮೂರು ಅಮೂಲ್ಯ ಗ್ರಂಥಗಳಿವು.

**ವ್ಯಕ್ತಿ-ವ್ಯಕ್ತಿತ್ವ- ಸಮೃದ್ಧಿ ಪರ್ಸನಾಲಿಟಿ ಡೆವಲೆಪ್‌ಮೆಂಟ್** ಇದು ಇತ್ತೀಚೆಗೆ ವಿದೇಶದಿಂದ ಹೊಸತಾಗಿ ಆಮದಾದ ಸರಕು ಅಲ್ಲ. ಭಾರತದಲ್ಲಿ, ಮನೆಮನೆಗಳಲ್ಲಿ, ಅದಕ್ಕೂ ಬಹಳ ಹಿಂದೆ ಕಾಡುಗಳಲ್ಲಿದ್ದ ಪರ್ಣಕುಟಿ, ಆಶ್ರಮಗಳಲ್ಲಿ ನಮ್ಮದೇ 'ದೇಸೀ' ಪರಂಪರೆಯಲ್ಲಿ ಸಂಸ್ಕಾರ ಪಡೆಯುವ -ಕೊಡುವ ರೀತಿವಿಶಿಷ್ಟ. ಅದು ಪಾಶ್ಚಾತ್ಯ ರೀತಿಗಳಿಗಿಂತ ಭಿನ್ನ ಮತ್ತು ಪ್ರಾಚೀನ. ಆದರೆ ಅದಕ್ಕೂ ಅತ್ಯಾಧುನಿಕ, ಹೆಚ್ಚು ಮೌಲಿಕ ಹಾಗೂ ಶಾಶ್ವತ. ಪ್ರತಿಮನೆ, ಶಾಲೆ, ಕಛೇರಿಯಲೇ ಇರಲಬೇಕಾದ ಸಂಸ್ಕಾರಭರಿತ 'ವಿಟಮಿನ್‌ಟಾನಿಕ್' ಗ್ರಂಥಗಳು.

ಶ್ರೀ ಧರ್ಮಸ್ಥಳ ಮಂಜುನಾಥೇಶ್ವರ ಪಬ್ಲಿಕೇಷನ್ ಟ್ರಸ್ಟ್ (ರಿ)
ಉಜಿರೆ - 574 240

ಮಂಜುಶ್ರೀ ಪ್ರಿಂಟರ್ಸ್, ಉಜಿರೆ